


ಡಾ. ಕರುಣಾಕರ ನಿಡಿಂಜಿ ಇವರಿಂದ ಕೃತಿ ಪರಿಚಯ



ಕವಿ ಕುತ್ಯಾಳ ನಾಗಪ್ಪ ಗೌಡ ಇವರಿಂದ ಅತಿಥಿ ಭಾಷಣ



ಪ್ರಶಸ್ತಿ ಸಮಾರಂಭದಲ್ಲಿ ಸಚಿವ ಮಾನ್ಯ ದಿನೇಶ್ ಗುಂಡೂರಾವ್



# ಹಿಂಗಾರ



ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್
**ಕೊಲ್ಯದ ಗಿರೀಶ್**

ಸಂಪಾದಕರ್
**ಡಾ. ಪೂವಪ್ಪ ಕಣಿಯೂರು**
**ವಸಂತ ಬಿ.ಪಿ.**

ವ್ಯವಸ್ಥಾಪಕ ಸಂಪಾದಕರ್
**ಉಮರಬ್ಬ**

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka** | **ಕರ್ನಾಟಕ** |
| **Arebhasa Culture and** | **ಅರೆಭಾಷೆ ಸಂಸ್ಕೃತಿ ಮತ್ತು** |
| **Sahitya Academy** | **ಸಾಹಿತ್ಯ ಅಕಾಡೆಮಿ** |
| Coffee Kripa, Ist Floor | ಕಾಫಿಕೃಪಾ, ಒಂದನೇ ಮಹಡಿ, |
| Rajaseat Road | ರಾಜಾಸೀಟ್ ರಸ್ತೆ |
| Madikeri- 571201 | ಮಡಿಕೇರಿ -೫೭೧ ೨೦೧ |
| Ph: 08272 - 223055 | ದೂರವಾಣಿ : ೦೮೨೭೨ – ೨೨೩೦೫೫ |
| arebaseacademy@gmail.com | arebaseacademy@gmail.com |
| www.arebaseacademy.com | www.arebaseacademy.com |
| Chief Editor : | ಪ್ರಧಾನ ಸಂಪಾದಕರ್ |
| **Kolyda Girish** | **ಕೊಲ್ಯದ ಗಿರೀಶ್** |
| Editor's : | ಸಂಪಾದಕರ್ |
| **Dr. Poovappa Kaniyoor** | **ಡಾ. ಪೂವಪ್ಪ ಕಣಿಯೂರು** |
| **Vasantha B.C.** | **ವಸಂತ ಬಿ.ಪಿ.** |
| Managing Editor : | ವ್ಯವಸ್ಥಾಪಕ ಸಂಪಾದಕರ್ |
| **Umarabba** | **ಉಮರಬ್ಬ** |
| Cover Design : | ಮುಖಪುಟ ವಿನ್ಯಾಸ |
| **Kallur Nagesh** | **ಕಲ್ಲೂರು ನಾಗೇಶ** |
| Printed at : | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Pages : 72 | ಪುಟಗಳು : 72 |
| Copies : 500 | ಪ್ರತಿಗಳು : ೫೦೦ |
| Vol. : 1-3 | ಸಂಪುಟ ೧ ಸಂಚಿಕೆ ೩ |
| Period : January To March | ಜನವರಿ–ಮಾರ್ಚ್ |
| Price : Rs. 20 | ಬೆಲೆ : ರೂ. ೨೦ |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. ೨೦೦ |

# ಅಧ್ಯಕ್ಷರ ಮಾತ್

ನಾವೀಗ ಹಿಂಗಾರನ ಮೂರ್ನೇ ಆವೃತ್ತಿಗೆ  ಪಾದರ್ಪಣೆ ಮಾಡ್ತಾವೊಳೋ. ಹಿಂದಿನ ಎರಡ್ ಆವೃತ್ತಿಗೆ ನೀವ್‌ಗ ನೀಡ್ದ ಬೆಂಬಲಕ್ಕೆ ನಾವ್ ಋಣಿಗ.

ಬಹುದಿನಂದ ಆಸೆ ಪಟ್ಟಿದ್ದ ಸಾಹಿತ್ಯ ಕೃಷಿಗೆ ಚಾಲನೆ ಕೊಟ್ಟ್, ಅಕಾಡೆಮಿಂದ ಬೇರೆ ಬೇರೆ ಪ್ರಕಾರದ ಹತ್ತ್ ಪುಸ್ತಕಗಳ ಬಿಡುಗಡೆ ಮಾಡ್ದೊ.  ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತೆ ಶ್ರೀಮತಿ ವೈದೇಹಿಯವು ಪುಸ್ತಕನ  ಲೋಕಾರ್ಪಣೆ ಮಾಡ್ದೊ. ಬಾಷೆನ ಬಗ್ಗೆ ಮತ್ತೆ ಬರವಣಿಗೆನ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದೊ. ಅಕಾಡೆಮಿವತಿಂದ 2014 ನೇ ಸಾಲ್‌ನ ಗೌರವ ಪ್ರಶಸ್ತಿಗೆ ಶ್ರೀ ಬಾರಿಯಂಡ ಜೋಯಪ್ಪನವು ಮತ್ತೆ ಶ್ರೀ ಹೊದ್ದೇಟ್ಟಿ ಭವಾನಿ ಶಂಕರನವು ಭಾಜನರಾದೋ.

ನಮ್ಮ ಹಕ್ಕಲೆ  ನಾವ್ ನಡ್ಸಕಾದ ಜವಾಬ್ದಾರಿನ ಸಾಲೇ ಉಟ್ಟು. ಸಾಂಸ್ಕೃತಿಕ ನಗರ ಮೈಸೂರ್‌ಲಿ ನಮ್ಮ ಅರೆಬಾಸೆನ ಶ್ರೀಮಂತ  ಸಂಸ್ಕೃತಿ ಅನಾವರಣ ಮಾಡಿಕೆ ಅಕಾಡೆಮಿ ಸ್ಥಾಯಿ ಸಮಿತಿ ಸಭೆಲಿ ತೀರ್ಮಾನ ಮಾಡ್ಯೊಳೊ. ಹಂಗೇ ಮುಂದಿನ ದಿನಲಿ ಅರೆಭಾಷೆ ಕಮ್ಮಟಗಳು, ಶಾಲಾ ಕಾಲೇಜ್‌ಲಿ ಸಾಂಸ್ಕೃತಿಕ ತರಬೇತಿ ಕೊಟ್ಟ್ ನಮ್ಮ ಸಂಸ್ಕೃತಿನ ಯುವ ಜನಾಂಗಕ್ಕೆ ಪರಿಚಯ ಮಾಡಿಕೆ ಉತ್ಸಾಹಲಿ ಒಳೊ. 2015 ನೇ ಸಾಲ್‌ನ ಪುಸ್ತಕ ಬಹುಮಾನ ಹಾಂಗೆ ಗೌರವ ಪ್ರಶಸ್ತಿ ಪ್ರಧಾನ ಮಾಡ್ವ ಜಂಬರ ಮುಂದೆನ ಜೂನ್ ತಿಂಗಳ್ಲಿ ನಡ್ಸ್‌ವ ಏರ್ಪಾಡ್ ಮಾಡ್ತಾ ಓಳೊ.

ಈ ಮೂರ್ನೇ ಸಂಂಚಿಕೆಲಿ ಪೊನ್ನಿ, ಮಾಯಿ, ಸುಗ್ಗಿ ತಿಂಗಳ್ಲಿ ಅಕಾಡೆಮಿ ಮಾಡ್ದ ಸಾಂಸ್ಕೃತಿಕ ಸಮಾವೇಶನ ಹಾಂಗೆ ಪ್ರಾಯೋಜಿಸಿದ ಜಂಬರನ ದಾಖಲ್ಸಿಯೊಳೊ. ಈ ಮೂಲಕ ನಾವ್ ಅಕಾಡೆಮಿ ಹಮ್ಮಿಕೊಂಡ ಕಾರ್ಯಗಳ ನಿಮ್ಮ ಮುಂದೆ ಇಸುವ ಪ್ರಯತ್ನನ ಮಾಡ್ಯೊಳೊ.

ಈ ಮೂರ್ನೇ ಸಂಚಿಕೆ ಸಿದ್ದ ಮಾಡ್ವಲ್ಲಿ ಹಿರಿಯ–ಕಿರಿಯ ಬರಹಗಾರರ್ ಸಹಕರಿಸ್ಯೊಳರಿ. ವಿವಿಧ ಬಗೆನ ಮುಖ್ಯವಾಗಿ ಕವನ, ಕಥೆ, ಶೈಕ್ಷಣಿಕ– ಸಾಮಾಜಿಕ,. ಸಾಂಸ್ಕೃತಿಕ ಚಿಂತನೆಗಳಿರುವ ಬರಹನ ನೀಡಿ ಉಪಕಾರ ಮಾಡ್ಯೊಳರಿ. ಅಕಾಡೆಮಿನ ಎಲ್ಲಾ ಸದಸ್ಯರ್, ರಿಜಿಸ್ಟ್ರಾರ್, ಎಲ್ಲಾ ಕಾರ್ಯಲಿ ಕೈ ಜೋಡಿಸ್ಯೊಳೊ. ಈ ಸಂಚಿಕೆನ ಸಂಪಾದಕರಾದ ಡಾ. ಪೂವಪ್ಪ ಕಣಿಯೂರ್ ಮುತುವರ್ಜಿಲಿ ಕೆಲ್ಸ ಮಾಡ್ಯೊಳೊ. ಸಂಚಿಕೆನ ವಿನ್ಯಾಸಗೊಳ್ಸಿ ಪ್ರಿಂಟ್ ಹಾಕ್ಸುವೊಲ್ಲಿ ಮಂಗಳೂರ್ನಆಕೃತಿ ಪ್ರಿಂಟ್ಸ್‌ನೊವು, ಹಂಗನೇ ಡಿ.ಟಿ.ಪಿ ಮಾಡುವಲ್ಲಿ ಚೆನ್ನಕೇಶವ ಕಂಪ್ಯೂಟರ್‌ನ ಶ್ರೀಮತಿ ಪುಷ್ಪಲತಾ ಸಹಕರಿಸ್ಯೊಳೊ. ಹಿಂಗಾರಕೆ ಸದಸ್ಯರರಾಗಿ ಪ್ರೀತಿಲಿ ತಕಂಡ್  ಓದುವ ನೀವ್ಗೆಲ್ಲಾ ನನ್ನ ಕೃತಜ್ಞತೆಗ.

20.05.2016

**ಕೊಲ್ಯದ ಗಿರೀಶ್**

**ಸಂಪಾದಕೀಯ**

ಇದ್ ಅಕಾಡೆಮಿಯು ಪ್ರಕಟಿಸುತ್ತಿರ್ವ ಮೂರ್ನೆ ಸಂಚಿಕೆಯಾಗುಟು. ಈ ಮೊದಲು ನಾವ್ ಅಕಾಡೆಮಿಂದ ಪ್ರಕಟ ಮಾಡ್ದ ಎರ್ಡ್ ತ್ರೈಮಾಸಿಕಗ ಮೆಚ್ಚ್‌ಗೆಗೆ ಪಾತ್ರ ಆಗ್ಯೊಳೊಂತೇಳ್ವ ಖುಷಿ ನಮ್ಮೊದು. ಯಾಕೆಂತ ನೀವು ಕೇಳ್ರೆ, ಈಗ ಈ ಹಿಂಗಾರ ತ್ರೈಮಾಸಿಕೆಗೆ ಬರೆಯುವವು ಮತ್ತು ಓದುಗರ್ ಹೆಚ್ಚಾಗ್ತಾಳೊ. ಒಟ್ಟಾರೆ ಇದರ್ಲಿ ಭಾಗಿಯಾಗುವವು ತುಂಬ ಜನ ಆಗ್ಯೋಳೊ.

ನಾವ್ಗೆಲ್ಲಾ ಗೊತ್ತಿರುವ ಹಾಂಗೆ ಜನವರಿಂದ ಮೇ ತಿಂಗವರೆಗಿನ ಕಾಲಂತೇಳ್ರೆ ಅದ್ ಎಲ್ಲಾ ದೃಷ್ಟಿಲು ಎಲ್ಲವ್ಕೂ ಜರೂರಿನ ಕಾಲ; ಜೊತೆಗೆ ಬಿರುಬಿಸಿಲಿನ ಸಂದರ್ಭ. ಅದರ್ಲೂ ಈ ಸಲದ ಬಿಸಿಲ್‌ಂತೇಳ್ರೆ ಸಹಿಸಕ್ಕಾಗದಷ್ಟಾಗುಟ್ಟು. ಮಳೆ ಬಾರದೆ ಬೆಳೆ ಕರಂಟಿಟ್ಟು. ನದಿ-ಹಳ್ಳಗ ಒಣಗಿ ಹಳ್ಳ ಹಿಡ್ದ್‌ಹೋಗಳೊ.

ಅರೆಭಾಷಿಕ ಜನಂಗ ವಾಸಿಸುವ ಸುಳ್ಯ –ಮಡಿಕೇರಿಲಿ, ಅಲ್ಲಿನ ಒಕ್ಲುಗಳ ಕೃಷಿ-ತೋಟಗ ಎಲ್ಲಾ ಸುಟ್ಟು ಹೋಗುವ ಪರಿಸ್ಥಿತಿ ನಿರ್ಮಾಣ ಆಗುಟು. 'ಕಾಲೈ ತಸ್ಮೈ ನಮಃ' ಎನ್ನುವ ಹಂಗೆ ಜನ ಎಲ್ಲಾ ಬಾಯಿ ಬುಡುವಾಂಗೆ ಆವುಟು. ಒಂದು ಮಾತು ನೆನಪಾಗುತ್ತಾ ಉಟ್ಟು. ನಮ್ಮ ಗಾಂಧಿ ಪಿತಾಮಹ ಹೇಳ್ದಂಗೆ 'ಈ ಭೂಮಿ ನಮ್ಮೆಲ್ಲರ ಅಗತ್ಯಗಳನ್ನು ಪೂರೈಸಬಲ್ಲದು; ದುರಾಸೆಗಳನ್ನಲ್ಲ". ಈ ನರ ಮೊಂಸನ ದುರಾಸೆಗೆಲ್ಲಾ ಈ ಕ್ಷಾಮ- ಬರಕ್ಕೆ ಕಾರಣ ಆಗ್ತುಟುಂತ ಹೇಳಿರೆ ತಪ್ಪಿಲ್ಲೆ.

ಜಗತ್ತ್‌ಲಿ ಏನೇ ನಡೆತ್ತಿರ್ಲಿ ಜನಗ ಮಾತ್ರ ಅವರ ನಿತ್ಯ ಬದ್‌ಕ್‌ನ ಚಟುವಟಿಕೆಗ ಬುಡಿಕಿಲ್ಲೆ. ಬುಟ್ಟವೇನ!? ಬುಟ್ಟರೆ ಏನೋ ಕಳಕಂಡ ಬೇನೆ ಅವರ ಕಾಡ್ದೆ. ಅರೆಭಾಷಿಕ-ತುಳುವರಿಗೆ ಪೊನ್ನಿ ತಿಂಗಂದ ಸುಗ್ಗಿ ತಿಂಗ ಮುಟ್ಟ ಪುರುಸೊತ್ತೇ ಇರ್ದುಲ್ಲೆ. ಬರ ಇರ್ಲಿ, ಕ್ಷಾಮ ಇರ್ಲಿ ಅವು ಕ್ಯಾರೆ ಮಾಡ್ದುಲ್ಲೆ. ಸುಗ್ಗಿ ಬಂತ್‌ತೇಳ್ರೆ ಮೈಯುಬ್ಬಿ

ಹಬ್ಬಗ, ಕೋಲ-ನೇಮಗ ಜಾತ್ರೆಗಳ ಸಡಗರಲಿ ಮೈಮರತ್ ಬುಡುವ ಕಾಲ.

ಅರೆಭಾಷಿಕ ಜನಗ ಈ ಸುಗ್ಗಿಂತೇಳುವ ಸಮಯಲಿ ಬಿಡುವಿಲ್ಲದ ಬ್ಯುಜ಼ಿಲಿನೂ ಅವು ಪೂರ್ವಿಕರಿಂದ ನಂಬಿದ ದೆವ್ವಗಳಿಗೆ ಕೋಲ-ನೇಮ ಕೊಟ್ಟಳೊ, ಕಳಿಯಾಟೊ ನಡೆಸಿಯೊಳೊ, ಸಂಕ್ರಮಣ ಸಂಭ್ರಮಿಸಿಯೊಳು, ಯುಗಾದಿ ಆಚರಿಸ್ಯೊಳೊ. 'ಬಿಸುಕಣಿ' ಇಟ್ಟ್ ಮನೆಯ ತೊಂಬರ-ಚಾವಡಿಲಿ ಪ್ರಾರ್ಥಿಸಿಯೊಳೊ. ಒಟ್ಟಾರೆ ಸುಗ್ಗಿಂತೇಳಿರೆ ನಾವ್ಗೆ ಮನೆ ಮನಗಳ್ಲಿ ಸಂಭ್ರಮ. ಕಾಫಿ ಕ್ಯೊಯ್ದ್, ಅಡಿಕೆ, ಮೆಣಸ್ ಹಾಂಗೆನೆ ರಬ್ಬರ್ ತಟ್ಟೆಗ ಮನೆ ತುಂಬಿರುವ ಕಾಲಲಿ ಇದೆಲ್ಲಾ ನಡೆಯೊಕು. ಐಶ್ವರ್ಯ ಇರ್‌ಕಾಕನ ಸಂಭ್ರಮಿಸೊದು ತಪ್ಪಲ್ಲ; ಸಹಜ.

ಬಿಸುಕಣಿ ಸುಗ್ಗಿಯ ವಿಶೇಷ ಆಚರಣೆ. ಇದರ ಪಗ್ಗು ಹದಿನೆಂಟು ಎಂತಲೂ ಹೇಳ್ವೆ. ಒಕ್ಕಲ್ಮೆ ಮಾಡೊವುಕ್ಕೆ ಭೂಮಿ ಎಂದರೆ ಬರೀ ಮಣ್ಣಲ್ಲ; ತಾಯಿ ರೂಪಿಣಿ. ಮಣ್ಣನ್ನು ಹೆಣ್ಣಿನ ರೂಪಲಿ ಕಂಡದ್ದರ ಪ್ರತೀಕವಾಗಿಯೇ ನಮ್ಮ ಎಲ್ಲಾ ಕೃಷಿ ಸಂಬಂಧಿ ಆಚರಣೆಗಳ ಮೂಲ ಇರ್ದು. ಕೆಡ್ಡಸಾಂತೇಳಿರೆ "ಭೂಮಿ ಅವ್ವನ ಮೀವ ಹಬ್ಬಂತಾದರೆ; ಬಿಸುಂತೇಳಿರೆ ಮದುಮಗಳ ರೂಪಲಿ ಭೂಮಿನ ಅಲಂಕರಿಸಿ ನೋಡ್ದು" ವಿವಿಧ ತರಕಾರಿಗ, ಕನ್ನಡಿ, ಆಭರಣ ಪೆಟ್ಟಿಗೆ, ಕುಂಕುಮ ಕರಂಡಿಗೆ ಹಲಸು ಸಹಿತ ಬೇರೆ ಬೇರೆ ಫಲ ವಸ್ತುಗ ಬಿಸುಕಣಿಗೆ ಇಸುವಲ್ಲಿ ಹೆಣ್ಣಿನ ಅನನ್ಯ ಸತ್ವ ಆಗಿರುವ 'ಫಲವಂತಿಕೆ'ನ ಕಾಂಬೋದೆಂದರ್ಥ. ಬಿಸು ಕಣಿ ಇಟ್ಟ ದಿನ ಗದ್ದೆ ಹುಣಿಲಿ ಕೈಬಿತ್ತು ಹಾಕುವ ವಿಧಿ ನಡ್ಸುದು, ಗದ್ದೆಲಿ ಎತ್ತ್ ಮಾದಿಸಿ ಬಿತ್ತೋಕುಂತೇಳ್ವ ಕ್ರಮನ ಈ ಬಿಸು ದಿನ ನಡ್ಸುದು. ಇದೇ ಉದ್ದೇಶಲಿ ಆಗಿದ್ದದೆ. ಹಿಂದಿನ ಕಾಲಲಿ ಗೇಣಿ ಒಕ್ಲುಗ ಭೂಮಾಲಿಕ ಜಮಿನ್ದಾರ ಧನಿಗಳ ಗುತ್ತು/ ಬೀಡುಗಳಿಗೆ ಹೋಗಿ 'ಬೆಳೆಕಾಣಿಕೆ' ನೀಡುವ ಪದ್ಧತಿ ಇತ್ತು. ಈ ದಿನ ಧನಿಗಳ್‌ಂದ ಬರುವ ಬೆಳೆ ಬೆಳೆಯಕ್ಕೆ ಒಪ್ಪಿಗೆ ಪಡೆಯೊದು ಇಲ್ಲಿನ ಉದ್ದೇಸ. ಇಂದ್ ಕಾಲ ಬದಲಾಗುಟು. 'ಉಳುವವನೇ ಹೊಲದೊಡೆಯ' ಅಂದ ಮೇಲೆ ಒಪ್ಪಿಗೆ ಪಡೆಯುವ ಅಗತ್ಯ ಏನುಟು? ಆದರೆ 'ಬಿಸುಕಣಿ' ಇಟ್ಟು ಸಂಭ್ರಮಿಸುವುದುಟ್ಟು.

ನಾವು ಯೋಚಿಸಿದಂಗೆ ಈ ಸಂಚಿಕೆಲಿ ವರ್ತಮಾನದ ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ ಸಂಗತಿಗ ಕುರಿತ ಲೇಖನಗ ಬರಹಗ ಸಂಕಲಿಸ್ಯೊಳೊ. ಈ ಬಗೆಯ ಬರಹಗ ಬರಿನಿಂತೇಳಿ ನಮ್ಮ ಅರೆಭಾಷಿಕ ಬರಹಗಾರರಲಿ ನಾವ್ ವಿನಂತಿಸಿಕೊಂಡ ಹಾಂಗೆ ಬರ್ದು ಕಳುಹಿಸ್ಯೊಳೊ. ಕತೆ ಕವನಗಳೊಟ್ಟಿಗೆ ವೈಚಾರಿಕ ಲೇಖನಗಳ ಮುಂದೆನು ಬರ್ದು ಕಳ್ಸಿರೆ ಈ ಸಂಚಿಕೆ ಮೌಲಿಕವಾಗಿ ಮುಂದುವರ್ಯಕೆ ಸಾಧ್ಯವುಟ್ಟು. ಇನ್ನು ಮುಂದೆನೂ ನಾವ್ಗೆ ಬರಹಗಾರರ್ ಸಹಕರಿಸೋಕುಂತ ನಮ್ಮ ಭಾವನೆಯಾಗುಟು; ಹಾಂಗೆ ಬರಹಗಾರರ್ ತಮ್ಮ ಬರಹಗ ಕಳ್ಸುವೆಂತೇಳಿ ನಂಬ್ಯೊಳೊ ಕೂಡ. ಈ ಸಂಚಿಕೆಗೆ ಮಸ್ತ್ ಜನ ಹಿರಿ-ಕಿರಿ ಬರಹಗಾರ್ ಕಥೆ, ಕವನ, ಶಿಕ್ಷಣ, ಅಡುಗೆ, ವೈದ್ಯ ಜಾನಪದ ಆಚರಣೆ-ಪದ್ಧತಿ, ಸಂಸ್ಕೃತಿ ಚಿಂತನೆ, ಗಾದೆ ಸಹಿತ ಬರಹಗ ಕೊಟ್ಟ್ ಸಹಕರಿಸ್ಯೊಳೊ.

ಇಲ್ಲಿನ ಬರಹಗ ಬರೇ ಅರೆಭಾಷಿಕ ಸಾಂಸ್ಕೃತಿಕ ಸೊಗಡ್‌ಗೆ ಮಾತ್ರ ಮಿತವಾಗಿಲ್ಲೆ; ಬದಲಾಗಿ ಅರೆಭಾಷಿಕರೊಟ್ಟಿಗಿನ ಇತರ ಸಂಸ್ಕೃತಿಗನ ಪರಿಚಯನು ಅರೆಭಾಷೆಲಿ ಮಾಡುವಂತಾಗ್ಯೊಳೊ. ಈ ಸಂಚಿಕೆಲಿ ಹೆಚ್ಚಿನ ಅರೆಭಾಷಿಕ ಯುವ ಬರಹಗಾರರ್ ಸೇರಿಗೆಯಾಗೊಳೊ. ಇದ್ ನಾವ್ಗೆ ಸಂತೋಷ ಕೊಟ್ಟ ಸಂಗತಿಯಾಗುಟು. ಪ್ರತಿ ಸಂಚಿಕೆಲಿನೂ ಒಬ್ಬ ಹಿರಿಯ ಬರಹಗಾರರ, ಕಲಾವಿದರ ಅಥವ ಸಾಮಾಜಿಕ ಸೇವಾನಿರತ ವ್ಯಕ್ತಿಗಳ ಪರಿಚಯ ಇರೊಕುಂತೇಳ್ವ ಆಶಯಲಿ ಹಿರಿಯ ಬರಹಗಾರರಾದ ವಿದ್ವಾನ್ ಟಿ.ಜಿ. ಮುಡೂರರನ್ನು ಪರಿಚಯಿಸುವ ಪ್ರೊ. ಬಿಳಿಮಲೆಯವರ ಲೇಖನ ಈ ಸಂಚಿಕೆಲಿ ಸೇರಿಸ್ಯೊಳೊ.

ಜನವರಿಂದ–ಮಾರ್ಚ್ ತಿಂಗಳ (ಪೊನ್ನಿ, ಮಾಯಿ, ಸುಗ್ಗಿ ತಿಂಗ) ಈ ಅವಧಿಲಿ ಅಕಾಡೆಮಿ ಪ್ರಯೋಜಿಸಿದ ಹಾಂಗೆನೆ ಅಕಾಡೆಮಿ ನಡ್ಸಿದ ಕಾರ್‍ಯಕ್ರಮಗ ಕಡಿಮೆ. ಈ ಅವಧಿ ಮುಂದೆನೆ ಬಹುತೇಕ ಜಂಬರನ ನಾವು ಮಾಡಿ ಮುಗಿಸ್ಯೊಳೊ. ಮಾಡ್ದರ ಇಲ್ಲಿ ದಾಖಲಿಸ್ಯೊಳೊ.

ಈ ಸಂಚಿಕೆನ ಹೊರ ತಾಕೆ ಅಕಾಡೆಮಿ ಅಧ್ಯಕ್ಷರ್, ರಿಜಿಸ್ಟ್ರಾರ್, ಸರ್ವ ಸದಸ್ಯರ್ ಸಹಕರಿಸ್ಯೊಳೊ. ಬರಹಗಾರರ್ ಮುತುವರ್ಜಿ ಮತ್ತು ಭಾಷೆನ ಪ್ರೀತಿಲಿ ತಮ್ಮ ಬರಹಗಳ ನೀಡಿ ಸಂಚಿಕೆನ ಮಹತ್ವ ಹೆಚ್ಚಿಸ್ಯೊಳೊ. ಸಂಚಿಕೆನ ಮುಖಪುಟ ವಿನ್ಯಾಸ ಮಾಡಿ ಪ್ರಿಂಟ್ ಹಾಕ್ಸುವಲ್ಲಿ ಮಂಗಳೂರಿನ ಆಕೃತಿ ಪ್ರಿಂಟ್ಸ್‌ನ ಕಲ್ಲೂರು ನಾಗೇಶ್, ಅಕ್ಷರ ಜೋಡಣೆಲಿ ಸುಳ್ಯದ ಚೆನ್ನಕೇಶವ ಜೆರಾಕ್ಸ್‌ನ ಶ್ರೀಮತಿ ಪುಷ್ಪಲತಾ ಎ, ಪ್ರತಿ ತಿದ್ದುವಲ್ಲಿ ಶ್ರೀಮತಿ ಸರೋಜಾ ಪಿ. ಕಣಿಯೂರು ಕೈ ಜೋಡಿಸ್ಯೊಳೊ. ಸಹಕರಿಸಿದ ಎಲ್ಲವ್ಕೆನೂ ತುಂಬು ಕೃತಜ್ಞತೆನ ನಾವು ತಿಳ್ಸುವೆ.

25.04.2016

ಡಾ. ಪೂವಪ್ಪ ಕಣಿಯೂರು



# ಹಿಂಗಾರ ಒಡ್ಸ್‌ಕನ

**ಅನುಭವ**



**ವೈದ್ಯ**



**ಕವನಗ**



**ಗಾದೆಗ**



# ಪ್ರಶಸ್ತಿಗಳಿಂದ ಎತ್ತರದ ಮುಡೂರು ಮಾಸ್ಟ್ರ

ಪುರುಷೋತ್ತಮ ಬಿಳಿಮಲೆ

ಟಿ.ಜಿ. ಮುಡೂರು ಅಥವಾ ಕನ್ನಡ ಪಂಡಿತರು ಅಂತ ಹೆಸರುವಾಸಿಯಾಗಿರುವ ಇವರ ಪೂರ್ಣ ಹೆಸ್ರ್ ತಮ್ಮಯ್ಯ ಗೌಡ ಮುಡೂರು ಅಂತ. ಅವರ ಅಪ್ಪ ಸುಬ್ಬಪ್ಪ ಗೌಡ, ಅವ್ವ ಬಾಲಕ್ಕ. ಅವ್ಕೆ ಈಗ 89 ವರ್ಷ ಪ್ರಾಯ. ಅವು ಹುಟ್ಟಿದ್ 24.11.1927 ರಂದ್. ಈಗ ಕೇರಳಕ್ಕೆ ಸೇರಿ ಹೋದ ಮುಡೂರು ಎಂಬ ಊರ್ಲಿ ಅವರ ಹುಟ್ಟು. ಮದರಾಸ್ಲಿ ಅವು ವಿದ್ವಾನ್ ಪರೀಕ್ಷೆ ಮಾಡ್ಲೊ. ಮುಂದೆ ಮೈಸೂರು ವಿಶ್ವವಿದ್ಯಾಲಯಂದ ಅವು ಎಂ.ಎ.(ಕನ್ನಡ) ಮತ್ತು ಬಿ.ಎಡ್ ಡಿಗ್ರಿ ತಕ್ಕೊಂಡೊ. ಮುಂದೆ 1948ರ್ಲಿ ಮಾಸ್ಟ್ರಾಗಿ ಕೆಲಸಕ್ಕೆ ಸೇರಿದ ಅವು, ಬೇರೆ ಬೇರೆ ಕಡೆ ಕೆಲ್ಸ ಮಾಡಿ 1982ರಲ್ಲಿ ಪಂಜ ಜ್ಯೂನಿಯರ್ ಕಾಲೇಜಲ್ಲಿ ಕೆಲಸ ಮಾಡಿ ರಿಟಾಯರ್ ಆದೊ. ಈಗ ಅವು ಪಂಜಲಿಯೇ ಮನೆ ಮಾಡಿಕೊಂಡೊಳೊ. ಟಿ.ಜಿ. ಮುಡೂರು ನನ್ನ ಮಾಸ್ಟ್ರು, ಅಂದುನೂ ಇಂದುನೂ. ನನ್ನಂಗೆ ಸಾವಿರ ಸಾವಿರ ಮಕ್ಕಳಿಗೆ ಅವು ಪಾಟ ಹೇಳ್ಯೊಳೊ.

ನಾವೆಲ್ಲ ಸಣ್ಣ ಇರ್ಕನ 'ಕಣ್ ಕನಸು ತೆರೆದಾಗ' ಅಂತ ಒಂದು ಪುಸ್ತಕ ಓದ್ತಿದ್ದೊ. ಅದ್ ಮುಡೂರು ಮಾಸ್ಟ್ರ್ ಎಡಿಟ್ ಮಾಡ್ದ್. ಆ ಕಾಲಲಿ ಅವು ಪಂಜ ಪರಿಸರಲಿ ಸಾಹಿತ್ಯದ ಕೆಲಸ ಮಾಡೊಕೂಂತ

ಹೇಳಿ 'ಸಂಗಮ ಸಾಹಿತ್ಯ ಮಾಲೆ'ನ ಕಲ್ಮಡ್ಕಲಿ ಸ್ಥಾಪನೆ ಮಾಡ್ಯೊಂಡೊ. ಅದರ ಜೊತೆಲಿ ಪಂಜಲಿ ಪ್ರತಿಮಾ ಬಳಗ ಮಾಡಿ, ಮೇಲೆ ಹೇಳಿದ ಪುಸ್ತಕನ ಅಲ್ಲಿಂದ ಪ್ರಕಟ ಮಾಡ್ದೊ. ಜೊತೆಗೆ ಯರ್ಮುಂಜ ರಾಮಚಂದ್ರರಿಗೆ ಹೆಸರು ತಂದುಕೊಟ್ಟ ' ಚಿಕಿತ್ಸೆಯ ಹುಚ್ಚು ಮತ್ತು ಇತರ ಕತೆಗಳು(1954) ಅಲ್ಲಿಂದಲೇ ಪ್ರಕಟಆತ್. 'ಕಣ್ ಕನಸು ತೆರೆದಾಗ' ಪುಸ್ತಕಲಿ ಪಂಜ–ಕಲ್ಮಡ್ಕ ಪರಿಸರಲಿ ಬರೆವ ತುಂಬ ಜನರಕತೆಗೊ ಇದ್ದೊ. ನಿರಂಜನ ಕೂಡಾ ಇದ್ದ ನೆಂಪು ನಂಗೆ. ಕ್ಷಯರೋಗಂದ ಸಣ್ಣ ಪ್ರಾಯಲಿ ತೀರಿ ಹೋದ ಕೆ.ರಾಮಚಂದ್ರ ಆಗಲೇ ಆ ಪರಿಸರಕ್ಕೆ ಹೊಸತನದ ಸಂವೇದನೆ ತಂದುಕೊಟ್ಟಿದ್ದೊ. ಹಿಂಗೆ ಪಂಜ, ಕಲ್ಮಡ್ಕ ಸೀಮೆಲಿ ಸಾಹಿತ್ಯದ ಬೀಜ ಬಿತ್ತಿದ ಮುಡೂರು ಮಾಸ್ಟ್ರು ಮುಂದೆ ಅಜ್ಜಾವರಲಿ 'ಗೀತಾ' ಪ್ರಕಾಶನ, ಬೆಳ್ತಂಗಡಿಲಿ 'ಕಾಜಾಣ' ಪ್ರಕಾಶನ ಮಾಡ್ಕಂಡ್ ಕೆಲಸ ಮಾಡ್ದೊ. ಪಂಜಲಿ ಅವ್ರೊಟ್ಟಿಗೆ ಸಚ್ಚಿದಾನಂದಯ್ಯ ಮತ್ತು ಕೆರೆಕ್ಕೋಡಿ ಗಣಪತಿ ಭಟ್ರ್ ತುಂಬಾ ಕೆಲಸ ಮಾಡ್ಯೊಳೊ. ಆಗ ಅವೆಲ್ಲ ಸೇರಿಕಟ್ಟಿದ 'ಸಂಗಮ ಕಲಾ ಸಂಘ' ಈಗ ಕೂಡಾ ಯಕ್ಷಗಾನಕ್ಕಾಗಿ ಕೆಲಸ ಮಾಡ್ತಾಉಟ್ಟು.

ಮುಡೂರು ಮಾಸ್ಟ್ರಿಗೆ ಸಾಹಿತ್ಯದ ಹಾಂಗೇ ಜಾನಪದದ ಮೇಲೆ ಕೂಡಾ ಬಾರೀ ಪ್ರೀತಿ ಇತ್ತ್. ಅದು ಹಳ್ಳಿ ಹಾಡು, ಕತೆಗಳ ಮೇಲೆ ಪ್ರೀತಿ ಇದ್ದ ಕಾಲ ಅಲ್ಲ, ಆದ್ರೂ ಅವುಕೆ ಅದರ ಮಹತ್ವಗೊತ್ತಿತ್. ಹಿಂಗಾಗಿಯೇ ಅವು 1950ರ ದಶಕಲಿ 'ಹೊಸಕೆರೆ ಹೊನ್ನಮ್ಮ' ಅಂತ ಒಂದು ನೇಜಿ ಹಾಡ್‌ನ ಸಂಗ್ರಹ ಮಾಡ್ದೊ. ಅದು ಕನ್ನಡಲಿ ಮುಂದೆ ಬಾರೀ ಮನ್ನಣೆ ಪಡ್ದ 'ಕೆರೆಗೆಹಾರ' ಅಂತ ಹೆಸರಿನ ಕಥನ ಕಾವ್ಯದ ನಮ್ಮೂರಿನ ಪಠ್ಯ.ಆ ಕಾಲಲಿ ಪಂಜ ಪರಿಸರಲಿ ಅದರ ಓದದವೇ ಇರ್ಕಿಲೆ. ಎಷ್ಟೋ ಸಾಲೆಗಳಲಿ ಮಕ್ಕ ಅದರ ನಾಟಕ ಮಾಡ್ಯೊಳೊ. ಮುಡೂರರ ಬೇರೆ ಕೆಲವು ಪುಸ್ತಕಗಂತೇಳ್ರೆ– ಕಾಡ ಮಲ್ಲಿಗೆ, ಹೊಸತುಕಟ್ಟು, ಕುಡಿಮಿಂಚು, ಪ್ರಗತಿಯಕರೆ (ಇವೆಲ್ಲಾ ಪದ್ಯ ಪುಸ್ತಕಗ), ಅಬ್ಬಿಯ ಮಡಿಲು (ಕಾದಂಬರಿ), ಜೀವದಯಾಷ್ಟಮಿ (ತರ್ಜುಮೆ), ಧಾರಾ ಪಯಸ್ವಿನಿ (ಸುಳ್ಯದ ಲೇಖಕರ ವಿಳಾಸವಿರುವ ಸಂಕಲನ), ನಂದಾ ದೀಪ, ಶ್ರೀಮತಿ ಶಿವಕುಮಾರಿ, ಕೇರಳ ಕುಮಾರಿ, ಸಖಿ, ಅಚ್ಚರಿಯ ಅರಳೆಲೆ, ಮಾಧ್ಯಮಾ (ನಾಟಕಗ), ಇನ್ನೂರಳಿಯ (ಹಾಸ್ಯ).

ಮುಡೂರು ಮಾಸ್ಟ್ರು ಆಕಾಶವಾಣಿಗೆ ಕೆಲವು ನಾಟಕಗಳ ಬರ್ದೊಳೊ. ಅವುಂತೇಳ್ರೆ ಹುತ್ತದಲ್ಲಿ ಹೂ, ದಯೆಯದಾಂಗುಡು, ಮತ್ತೆ ಅಮರಕಲ್ಯಾಣ ಕ್ರಾಂತಿ.

ಮುಡೂರು ಅವ್ಕೆ ಹಳಗನ್ನಡ, ಇಂಗ್ಲಿಷ್ ಮತ್ತೆ ಸಂಸ್ಕೃತ ಸಾಹಿತ್ಯದ ಮೇಲೆನೂ ಒಳ್ಳೆ ತಿಳುವಳಿಕೆ ಇತ್ತ್. ಅವುಗಳ ಓದಿದ ಆದಾರಲಿ ಅವು ಮುಕುಟೋರು ಭಂಗ, ಸಾವೊಲಿದ ಸಾವಿತ್ರಿ, (ಛಂದೋ ನಾಟಕಗ), ಗುರುವನಗುಡಿ, ಸೊನ್ನೆಯಿಂದ ಸೊನ್ನೆಗೆ, ಮತ್ತು ಹೃದಯರೂಪಕ (ಗೀತಾರೂಪಕಗ) ಇವ್ಗಳ ಬರ್ದೊ. ಇಷ್ಟು ಮಾತ್ರ ಅಲ್ಲದೆ ಅವು 'ಸಿಡಿಲ ಮರಿಅಶ್ವತ್ಥಾಮನ್' ಮತ್ತು 'ಮೋಹನ ಮುರಳಿ' (ಖಂಡಕಾವ್ಯಗ), 'ಪ್ರಥಮ ಸ್ವಾತಂತ್ರ್ಯ ಸಮರ' (ಯಕ್ಷಗಾನ ಪ್ರಸಂಗ), ಪುಸ್ತಗಳ ಹೊರತಂದಿದ್ದೊ.

ಮುಡೂರ್ ಸರ್ ಅವು ತುಳುಲಿ ಕೂಡಾತುಂಬಾಕೆಲ್ಸ ಮಾಡ್ಯೊಳೊ. ಅವು ಬರ್ದ 'ಜಾಗೀರ್‌ದಾರ್ ಜಗ್ಗೆ', 'ಗ್ರಾಜ್ಯುವೇಟ್‌ಗಿರಿಜ', 'ಸೀನನ ಸಿನೆಮೋ', ಗಟ್ಯಾಂಡರೊಟ್ಟಿ-ತೆಲ್ಪಾಂಡತೆಲ್ಲಾವು, ದೂರೊದ ಕುಕ್ಕು-ಮುಟ್ಟದಅಂಬಟೆ, ಗಡಿ ಬಿಡಿ ಗಂಗಯ್ಯೆ, ಕೆಡ್ಡಸೋ, ಬಲಿ ಪರ್ಬೊ, ಜೋಕುಳೆ ಬುದ್ದಿ, ನಾಟಕೊಗ ಒಂದು ಕಾಲಲಿ ಬಾರೀ ಹೆಸರು ಮಾಡಿದ್ದೊ.

ಬಹಳ ಹಿಂದೆನೇ ಸಂಗಮ ಕಲಾ ಸಂಗ ಕಟ್ಟಿ ಕೆಲಸ ಮಾಡಿದ ಅವು ಮುಂದೆ ದ.ಕ. ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಸುಳ್ಯ ತಾಲೂಕು ಸದಸ್ಯ ಆಗಿ 15 ವರ್ಷಕೆಲ್ಸ ಮಾಡ್ದೊ. ಸುಳ್ಯ ತಾಲೂಕು ಘಟಕ ಆದ ಮೇಲೆ ಅದಕ್ಕೆ ಮೂರು ವರ್ಸ ಅಧ್ಯಕ್ಷ ಆಗಿ ಕೆಲಸ ಮಾಡ್ದೊ. ಮುಂದೆ ಅರಂತೋಡು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿದ್ದೊ.

ಮುಡೂರು ಮಾಸ್ಟ್ರ ಕೆಲಸ ಮಾಡ್ತಿದ್ದ ಊರು ಪಂಜ. ಆದ್ರೆ ಅವರ ಯೇಚನೆಗ ಎಲ್ಲಾ ಆ ಊರಿಗಿಂತ ತುಂಬಾ ಮುಂದೆ ಇತ್ತ್. ಪ್ರೆಂಚ್ ಕಾದಂಬರಿಕಾರ ವಿಕ್ಟರ್ ಹ್ಯೂಗೋನ ಲಾ ಮಿಸರೇಬಲ್ (ದುಃಖಾರ್ತರು) ಅಧರಿಸಿ ಬರೆದ ಧರ್ಮಾಧಿಕಾರಿಯ ದೀಪ ಸ್ತಂಭಗಳು ನಾಟಕನ ಅವು 1968ರಷ್ಟು ಹಿಂದೆನೇ ಸ್ಟೇಜಿಗೆ ತಂದಿದ್ದೊ.

ಹಿಂಗೆ ಮುಡೂರು ಮಾಸ್ಟ್ರು ಮಾಡಿದ ಕೆಲಸಗ ತುಂಬಾ. ಅವು ಬದುಕಿ ಬಾಳಿದ ಊರುನ ಪೊರ್ಲುಲಿ ಬೆಳೆಸಿದೊ. ಈ ಎಲ್ಲಾ ಹಿನ್ನೆಲೆಲಿ ಮುಡೂರು ಮಾಸ್ಟ್ರು ಪ್ರಶಸ್ತಿಗಳಿಂದ ಎತ್ತರದಲಿ ನಿಲ್ಲುವ ವ್ಯಕ್ತಿ.



ಚುಟುಕು

## ಕನ್ಸ್‌ನ ಪೊರ್ಲು

ಕಣ್ಣ್‌ಲಿ ಕಾಂಬಕ್ಕಿರುವ ಪ್ರೀತಿಗಿಂತ
ಜೊತೆಲಿರ್ವ ಸ್ನೇಹನೇ ಪೊರ್ಲ್
ಕಾಣ್ವ ಕನ್ಸ್‌ಗಿಂತ ಕಾಣ್ದೆ ಇರ್ವ
ಕಲ್ಪನೆಗ ಪೊರ್ಲ್
ಬರ್ವಿ ಪದಗಿಂತ ಅಳ್ಸಿಕಾಗದ
ಸವಿಸವಿ ನೆನ್ಪುಗನೇ ಪೊರ್ಲ್

**ಕೊಕ್ಕಲೇ ಮಾಲಿನಿ ಮುತ್ತಪ್ಪ**

# ವಸಂತೋತ್ಸವಲಿ ಹಾಡದ ಹಕ್ಕಿ!

**ಕುತ್ಯಾಳ ನಾಗಪ್ಪ ಗೌಡ (ಕಿರಣ)**

ವಸಂತ ಋತುನ ಋತುಗಳ ರಾಜ ಅಂತ ಹೇಳ್ವೆ. ಕಾಡ್‌ನ ಆಸ್ಥಾನ ಗಾಯಕ ಕೋಗಿಲೆಗೆ ಪುರುಸೊತ್ತೇ ಇಲ್ಲೆ ಹಗಲಿಡೀ ಅಲ್ಲಲ್ಲಿ ಕಾರ್ಯಕ್ರಮ ರಾತ್ರಿ ಕೂಡಾ ಸಂಗೀತ ಕಛೇರಿ ಇದ್ದದೆ. ಮರಕೊಡಪನ ತಬಲದ ಪೆಟ್ಟ್ ಕಾಚುಕುಳ್ಳನ ಪಿಟೀಲ್, ನವಿಲಿನ ನರ್ತನವೂ ನಡಿಯೊದುಟ್ಟು. ಎಲ್ಲೆಲ್ಲೂ ಉಲ್ಲಾಸ. ಸಂತಾನ ಬಯಸುವ ಜೀವಿಗ ಮಿಲನದ ಉತ್ಸಾಹಲಿ ಇದ್ದವೆ. ಕುಮಾರವ್ಯಾಸ ಈ ಋತುವಿಗೆ ರಾಜನ ಪಟ್ಟ ಕಟ್ಟಿಟ್ಟು ವಸಂತ ನೃಪಾಲ ಪಾಂಡುರಾಜನ ಮೇಲೆ ನಡ್ಸಿದ ದಾಳಿ ಹೀಂಗಿತ್ತ್:

ಮೊರೆವ ತುಂಬಿಯ ಗಾಯಕರ ನಯ  
ಸರದ ಕೋಕಿಲ ಪಾಠಕರ ಬಂ  
ಧುರದ ಗಿಳಿಗಳ ಪಂಡಿತರ ಮಾಮರದ ಕರಿಘಟೆಯ  
ಅರಳಿದಂಬುಜ ಸತ್ತಿಗೆಯ ಮಂ  
ಜರಿಯ ಕುಸುಮದ ಚಾಮರದ ಚಾ  
ತುರ ವಸಂತನೃಪಾಲ ನಡೆದನು ಪಾಂಡುವಿನ ಮೇಲೆ

ತಾವರೆ ಕೊಡೆಯಡಿಲಿ ವಸಂತರಾಜ ಮುಂದುವರ್ದದೆ. ಆಚೆ ಈಚೆ ಗಾಯನ ಮಾಡೊವು, ಹೊಗಳೊವು, ಪಂಡಿತರ್ ಒಳೊ. ಬಗೆ ಬಗೆಯ ಹೂವು ಚಾಮರ ಬೀಸುವೆ. ಮನ್ಮಥನ ಬಾಣ ಕೂಡಾ ಹೂವೆ! ಹೂ ಬಾಣಗಳ ಪಾಂಡುರಾಜನ ಮೇಲೆ ಪ್ರಯೋಗಿಸಿದೆ. ಪಾಂಡುರಾಜ ಸೋತತ್. ಸೋತಂವ ಪಾಂಡು ಒಬ್ಬನೇ ಅಲ್ಲ. ಎಲ್ಲವೂ ಸೋತವೆ! ಋಷಿಗ ಸೋತ ಕತೆನೂ ಉಟ್ಟು ವಸಂತ ಮಾಸಲಿ ನಡ್ದದ್ ಕಂದರ್ಪನ ದರ್ಪ!

ನಮ್ಮ ವಸಂತ ಅಮೇರಿಕಲಿ ಸ್ಪ್ರಿಂಗ್, ಮಾರ್ಚ್, ಏಪ್ರಿಲ್, ಮೇ ತಿಂಗಳಲ್ಲಿ ಅವರ ಸ್ಪ್ರಿಂಗ್ ಬಂದದೆ. ಸಂತತಿಗೆ offspring ಅಂತ ಇಂಗ್ಲಿಷ್ ಭಾಷೆಲಿ ಹೇಳ್ವೆ. ಇದ್ ವಸಂತ ಕಾಲ (ಸ್ಪ್ರಿಂಗ್ ಹಾಂಗೂ ಸಂತತಿಗೆ ಇರುವ ಸಂಬಂಧನ ಸೂಚಿಸುವ ಪದ. ಎಲ್ಲಾ ಹಕ್ಕಿಗ ಹಾಡಿ ಸಂಭ್ರಮಲಿ ಇರ್ರ್‍ಯಾಕನ ಸುಮ್ಮಂಗೆ ಇದ್ದ್ ಗ್ರೀಷ್ಮ ಋತು ಬಾಕಾಕನ ದೊಡ್ಡ ಸ್ವರಲಿ ಹಾಡಿಕೊಂಬ ಹಕ್ಕಿ ಅಮೇರಿಕದ ಕಾಡಿಲಿ ಉಟ್ಟು. ಅದರ ಹೆಸರ್: ಓವೆನ್ ಬರ್ಡ್, ಕೀಟಗಳ ತಿಂದ್ ಬದುಕುವ ಪುಟ್ಟಹಕ್ಕಿ ತೂಕ ಸುಮಾರ್ 20 ಗ್ರಾಂನಷ್ಟ್ ಇರ್ದು ಗಾತ್ರ ಸುಮಾರ್ 10ರಿಂದ 15 ಸೆಂಟಿಮೀಟರ್. ಈ ಹಕ್ಕಿನ ಬಣ್ಣ ಓಲಿವ್ ಹಸಿರ್ ತಲೆಯ ಮೇಲೆ ಎರಡ್ ಕಪ್ಪು ನಾಮ; ಎದೆ ಮೇಲೆ ಅಲ್ಲಲ್ಲಿ ಕಪ್ಪು ಬೊಟ್ಟು. ಎಲೆ, ಕಡ್ಡಿ, ಗರಿಗಳ ಸಂಗ್ರಹ ಮಾಡಿ ನೆಲದ ಮೇಲೆ ಒಲೆಯ ಆಕಾರಲಿ ಗೂಡು ಕಟ್ಟಿದೆ. ಇದರ ಗೂಡು ಒಲೆಯ ಆಕಾರಲಿ ಇರೋದ್ಕೆ ಈ ಹಕ್ಕಿಗೆ ಒಲೆಹಕ್ಕಿ (Oven Bird) ಅಂತ ಹೆಸರ್, ಇದ್ ದೊಡ್ಡದನಿಲಿ ಹಾಡಿಕಾಕ್ಕನ 'ಟಿಚರ್' ಟೀಚರ್ ಅಂತ ಹೇಳ್ದ ಹಾಂಗೆ ಕೇಳ್ದೆ. ಕೆಲವು ಜನ ಇದರ ಟೀಚರ್ ಹಕ್ಕಿ ಅಂತಲೂ ಕರ್ದವೆ. (SEIURUS AUROCAPILLA ಅಂತ ಇದರ ವೈಜ್ಞಾನಿಕ ಹೆಸರ್).

ಎಲ್ಲರ ಒಟ್ಟಿಗೆ ಇದ್ದ್ ಎಲ್ಲರ ಹಾಂಗಿರದ ಈ ಹಕ್ಕಿನ ಗಮನಿಸಿ ಅಮೇರಿಕದ ಕೃಷಿಕ ಕವಿ ರಾಬರ್ಟ್ ಫ್ರಾಸ್ಟ್ (1874–1963) ಒಂದು ಕವಿತೆ ಬರ್ದುಟು. ಓವನ್ ಬರ್ಡ್ ಅಂತ ಹೆಸರ್ ಕೊಟ್ಟುಟು. ಹದಿನಾಲ್ಕ್ ಸಾಲಿನ ಈ ಕವಿತೆಲಿ ಯಾವ್ದು ಜೀವನ ವಿವೇಕ ಅಂತ ಹೇಳ್ವ ಪ್ರಯತ್ನ ಉಟ್ಟು. ವಸಂತ ಕಾಲಲಿ ಸಂಗೀತ ಕೇಳ್ಸಿಕಂಡ್ ಚಿಗುರಿ ಹೂಮುಡಿದ ಮರಕ್ಕೆ ಈಗ ಬೇಸಿಗೆ ಕಾಲದ ಬಿಸಿ ತಟ್ಟಿಟು. ಹಕ್ಕಿಗ ಹಾಡುದಿಲ್ಲೆ ವಸಂತದ ನಂತರ ಸಂತಸ ಇಲ್ಲೆ. ಗ್ರೀಷ್ಮದ ಬಿಸಿಲಿಗೆ ಎಲೆ ದರ್‍ಗ್ ಆಗುಟು. ಈ ಹೊತ್ತು ಕಾಡ್‌ನ ನಡೂಂದ ದೊಡ್ಡ ಸ್ವರದ ಹಾಡ್ ಮೂಡಿ ಬಂದದೆ. ಇದ್ ಒಲೆಹಕ್ಕಿಯ ಹಾಡ್ ಮರಗಳ ಶರೀರಕ್ಕೆ ಹಾಡಿನ ಸಾಂತ್ವನ ಹೇಳ್ವ ಪ್ರಯತ್ನ ಮಾಡ್ದೆ ಒಲೆಹಕ್ಕಿ. ವಸಂತ ಕಾಲಲಿ ಹಾಡದೆ ಹಕ್ಕಿ ಗ್ರೀಷ್ಮಲಿ ಹಾಡ್ದೆ. ಕಾಡಿಲಿ ಸಂಗೀತ ಇರುವ ಹಾಂಗೆ ನೋಡಿಕೊಂಡದೆ. ಇನ್ನು ವಸಂತ ಮುಂದಿನ ವರ್ಷ ಈಗ ಅಲ್ಲಲ್ಲಿ ಮಳೆ ಸುರ್ದದೆ. ಬಾನ್‌ಲಿ ಮೋಡ ಉಟ್ಟು. ಇನ್ನ್ ಮುಂದೆ ಕಷ್ಟದ ಕಾಲ. ಚಳಿಗಾಲನ ಕಳಿಯಕೆ ಭಾರೀ ಸಿದ್ಧತೆ ಬೇಕು. ಒಲೆ ಹಕ್ಕಿ ಕೂಡಾ ಹಾಡುವಿಕೆನ ನಿಲ್ಸಿದೆ ಈ ಹಕ್ಕಿಗೆ ಹಾಡಿಕೆ ಗೊತ್ತಿರುವ ಹಾಂಗೆ ಹಾಡದೆ ಇರಿಕೆ ಕೂಡಾ ಗೊತ್ತುಟ್ಟು! ಇದರ ಹಾಡ್ ಒಂದು ಮುಖ್ಯ ಸಂಗತಿನ ಹೇಳ್ದೆ: ಅಲ್ಪದಿಂದ ಸತ್ಫಲ ಪಡ್ಕೊಂಬುದು ಹೇಂಗೆ? ಇದ್ ಪ್ರಶ್ನೆ.

ಮರಗಳ ಕಷ್ಟಕಾಲಲಿ ಸಮಾಧಾನ ಹೇಳ್ವ ಹಾಂಗೆ ಈ ಹಕ್ಕಿ ಹಾಡ್. ಮರಗ ಹೂವು, ಹಣ್ಣು ಕೊಟ್ಟವೆ. ಬುಡಲಿ ನಿಂತ್ ಕೊಡಲಿಂದ ತನ್ನ ಕಡಿವವಂಗೂ ಮರ ನೆರಳ್ ಕೊಟ್ಟದೆ. ಈ ರೀತಿಯ ನಿಸ್ವಾರ್ಥಿ ಮರಗ ಕಷ್ಟಲಿ ಇರ್ರ್‍ಯಾಕನ ಒಲೆಹಕ್ಕಿ ಹಾಡಿನ ಮೂಲಕ ಸಾಂತ್ವನ ಹೇಳ್ದೆ. ಹಕ್ಕಿಯಂಥ ಸಣ್ಣಜೀವಿ ಸಿಕ್ಕಿದ ಅಲ್ಪ ಅವಧಿನ ಸರಿಯಾಗಿ ಉಪಯೋಗಿಸಿಕೊಂಡದೆ. ಮುಂದೆ ಪತನದ ಋತು. ಅಂದರೆ ಅಮೇರಿಕದ ಫಾಲ್

ಸೀಸನ್. ಫಾಲ್ (Fall) ಋತು ಕಷ್ಟದ ಬಾಗಿಲ್ ತೆರ್ದದೆ. ಹಾಡೊವು ಯಾರೂ ಇಲ್ಲೆ. ಹಾಡ್ ಕೇಳ್ವ ಆಸಕ್ತಿ ಯಾರಿಗೂ ಇಲ್ಲೆ. ಚಳಿಗಾಲನ ಎದ್ರಿಸಿಕೆ ತಯಾರ್ ಆಕು. ಯಾಗ ಹಾಡೊಕು, ಯಾಗ ಹಾಡಿಕೆ ಆಗದ್ ಅಂತ ಒಲೆಹಕ್ಕಿಗೆ ಗೊತ್ತುಟು.

ಈ ಕವಿತೆಯ ಧ್ವನಿ ಇರ್ದು ಹಾಡುವ ಹಾಂಗೂ ಹಾಡದೆ ಇರುವ ಮನೋಧರ್ಮಲಿ. ಒಲೆಹಕ್ಕಿ ವಸಂತ ಋತುಲಿ ಹಾಡ್‌ತಿಲೆ. ಗ್ರೀಷ್ಮಲಿ ಹಾಡ್ತ್. ಶರತ್ತಿಲಿ ಮೌನಿ ಆತ್. ತಾನ್ ಮಾಡೋಕಾದರ ಮಾಡ್ತ್. ಅಲ್ಪ ಜೀವಿ ಅಲ್ಪ ಅವಧಿನ ಸರಿಯಾಗಿ ಉಪಯೋಗಿಸಿತ್. ರಾಬರ್ಟ್ ಫ್ರಾಸ್ಟ್ ಇದೇ ಮನೋಧರ್ಮದ ಕವಿ. ಟಿ.ಎಸ್ ಎಲಿಯೆಟ್, ಎಜ್ರಾಪೌಂಡ್, ಡಬ್ಲ್ಯು.ಬಿ ಏಟ್ಸ್ ಈ ಕವಿಗ ಸಮಕಾಲೀನರ್. ಅವರ ವಿಚಾರಧಾರೆ ಕಾವ್ಯ ರಚನೆಯ ವಿಧಾನ ಫ್ರಾಸ್ಟನ ಹಾಂಗಲ್ಲ. ಜಗತ್ತಿನಾದ್ಯಂತ ಕವಿಗ ಏಲಿಯಟ್, ಏಟ್ಸ್ ಪೌಂಡ್ ಮುಂತಾದವರ ಹಿಂಬಾಲಿಸಿ ಹೋದರೂ ಫ್ರಾಸ್ಟ್ ತನ್ನ ಸ್ವಂತಿಕೆನ ಬುಟ್ಟುಕೊಟ್ಟಂವನಲ್ಲ. ಗ್ರಾಮೀಣ ಪ್ರದೇಶಲಿ ಕೃಷಿ ಭೂಮಿ ಖರೀದಿಸಿ ಕೃಷಿ ಮಾಡ್ತ್, ಕವಿತೆ ಬರ್ತ್, ಕಾವ್ಯದ ಪ್ರೊಫೆಸರನೂ ಆಗಿತ್ತ್. ಅವನ ಸ್ವಂತಿಕೆಯಿಂದ ಖ್ಯಾತ ಕವಿಯಾಗಿ ಒಳ್ತ್. ಒಲೆಹಕ್ಕಿಯ ಹಾಂಗೆ ಬೇಕಾಕನ ಬರ್ತ್, ಬೇಡಾಂತ ಆಕನ ಮೌನಿಯಾಗಿತ್ತ್. ಅರುವತ್ತು ವರ್ಷ ಬರ್ದದ್ 600 ಪುಟ. ಅಂದ್ರೆ ವರ್ಷಕ್ಕೆ ಸರಾಸರಿ 10 ಪುಟ ಬರ್ದ ಕವಿ ನಾ ಅಂತ ತನ್ನನ್ನೇ ಹಾಸ್ಯ ಮಾಡಿಕೊಂಬತ್ತಿತ್ತ್ ಫ್ರಾಸ್ಟ್.

ಸರಳವಾಗಿ, ಸಂಕ್ಷಿಪ್ತ ರೂಪಲಿ ಪರಿಚಿತ ವಸ್ತು, ಘಟನೆಗಳ ಮೂಲಕ ಚಿಂತನೆಯ ಮತ್ತೊಂದು ಬದಿನ ತೋರ್ಸುದು ಫ್ರಾಸ್ಟ್‌ನ ಕಾವ್ಯದ ವಿಶೇಷ ಗುಣ. ಸ್ವಂತಿಕೆ ಅವನ ಶಕ್ತಿ, ದೇಶಭಕ್ತಿ ಜೋಪಾನಮಾಡ್ಕೊಂಡ ಮೌಲ್ಯ. ರಸ್ತೆಯ ಆಯ್ಕೆ ಕೂಡಾ ಕವಿತೆಗೆ ವಸ್ತು ಆದೆ. ರಸ್ತೆಗ ಕವಲೊಡೆವಲ್ಲಿ ಸವೆಯದ ದಾರಿನ ಫ್ರಾಸ್ಟ್ ಆಯ್ಕೆ ಮಾಡಿಕಂಡದೆ. ನಡ್ದ್ ಸವೆದ ರಸ್ತೆಲಿ ಯಾರ್ ಬೇಕಾದ್ರು ಹೋಕ್. ಸವಾಲು ಇರ್ದು ಯಾರು ಹೋಗಿರದ ದಾರಿಲಿ! ಬೆಂಕಿಯಿಂದ ಜಗತ್ತಿನ ನಾಶ ಅಂತ ಜನಗ ಹೇಳ್ವೆ. ಹಿಮದಿಂದ ಕೂಡಾ ಜಗತ್ತಿನ ನಾಶವಾದರೆ ಆಶ್ಚರ್ಯಪಡಿಕೆ ಯಾರೂ ಇರಿಕಿಲ್ಲೆ ಅಂತ ಪ್ರಾಸ್ಟ್ ಹೇಳ್ದ್. ಬೇಲಿ. ಬಂಧನ. ಇರದ ಮತ್ತು ಮುಕ್ತ ಸಮಾಜನ ಸ್ವಾಗತಿಸುವ ಫ್ರಾಸ್ಟ್ ಒಳ್ಳೆಯ ಬೇಲಿ ಇದ್ದರೆ ನೆರೆಕರೆಯೂ ಚೆನ್ನಾಗಿ ಇದ್ದದೆ ಅಂತ ಮುಲಾಜಿಲ್ಲದೆ ಹೇಳ್ದ್. ಅಮೇರಿಕದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದ ಜಾನ್ ಎಫ್ ಕೆನಡಿಗೆ ರಾಬರ್ಟ್ ಫ್ರಾಸ್ಟನ ಸರಳತೆ, ಸ್ವಂತಿಕೆ, ದೇಶಭಕ್ತಿ, ಕವಿತಾಶಕ್ತಿ ಮುಂತಾದುವುಗಳ ಬಗ್ಗೆ ಗೌರವ ಇತ್ತ್. ಅಧ್ಯಕ್ಷರ ಅಧಿಕಾರ ಸ್ವೀಕಾರ ಸಮಾರಂಭದ ದಿನ ಫ್ರಾಸ್ಟನ ಕವಿತಾವಾಚನಕ್ಕೆ ಆಮಂತ್ರಿಸಿದ್ದೋ. ಅಷ್ಟರ ವರೆಗೆ ಯಾವ ಕವಿಗೂ ಈ ರೀತಿಯ ಗೌರವ ಸಿಕ್ಕಿದ್ದೇ ಇಲ್ಲೆ. ಅಮೇರಿಕ ಯುರೋಪಿಯನರ ಕೊಡುಗೆ ಅಲ್ಲ; ಅದ್‌ಕ್ಕೆ ತನ್ನದೇ ಆದ ಸಾಂಸ್ಕೃತಿಕ ಚರಿತ್ರೆ ಉಟ್ಟು ಅಂತ ಸಾರುವ ಕವಿತೆನ ಓದಿ ಸ್ವಾಭಿಮಾನಿ ಅಮೇರಿಕನರ ಮೆಚ್ಚುಗೆ ಪಡ್ತ್. ಇದ್ ಕೂಡಾ ಎಲ್ಲರೊಡನಿದ್ದ್ ಎಲ್ಲರ ಹಾಂಗೆ ಯೋಚಿಸದ ಫ್ರಾಸ್ಟ್ ನಿಲುವು. ಓವೆನ್‌ಬರ್ಡ್ ಫ್ರಾಸ್ಟ್ ಮನೋಧರ್ಮದ ರೂಪಕ ಅಂತ ಹೇಳಕ್. ●

# ಕನ್ಸ್‌ನ ಮದ್ವೆ

ಕೊಕ್ಕಲೇ ಮಾಲಿನಿ ಮುತ್ತಪ್ಪ

ವಾರೆ ಕಣ್ಣ್‌ಲಿ ನನ್ನನ್ನೇ ಅಂದ್ ನೋಡ್ದ ನೀ
ನಾವ್ ಯಾಗೋಳ್ ಆಗ್ತಿತ್  ಅಂದ್
ನಿಸರ್ಗಧಾಮ, ರಾಜಾಸೀಟ್‌ಲಿ ಭೇಟಿ

ಮಾಂದಲಪಟ್ಟಿ, ಅಬ್ಬಿಪಾಲ್ಸ್ ಗೋಲ್ಡನ್ ಟೆಂಪಲ್
ಅಲ್ಲಿ, ಇಲ್ಲಿ, ಸುತ್ತಾಡಿ ಪಡ್ತಿದ್ದೊ ಖುಷಿ
ಹಾಂಗಿರ್ಕನ ನಾವಿಬ್ರು ಮದ್ವೆ ಆಕುತ
ತೀರ್ಮಾನನೇ ಮಾಡ್ದೋ ನೋಡಿ

ನನ್ನ ಹೈದ ಮನ್ಸ್ ಗಟ್ಟಿ ಮಾಡಿ ಕೇಳಿ
ಬುಟ್ಟತ್ ಮನೆಯವರೊಟ್ಟಿಗೆ ಹೋಗಿ
ಅವು ಒಪ್ಪಿಗೆ ಕೊಟ್ಟೋ ಬೆನ್ನ್‌ಗೆ ದೊಣ್ಣೆಲಿ
ತಪ್ಪಿಕಾಂಬಕ್ಕಾಗಿ ಓಡೋಡಿ ಬಂದೋ ಗಲ್ಲಿ ಗಲ್ಲಿಲಿ

ಹಾಳ್ ಮನ್ಸ್ ಬುಟ್ಟಿರಿಕೆಯಾದೆನ
ನಾವ್ಗ್ ಮದ್ವೆಯಾದೊ "ಗೌಡ ಸಮಾಜಲಿ"
ವಾಲಗ ಸದ್ದ್‌ಂದ ಗೊತ್ತಾಗಿ ನೆಂಟ್ರವೆಲ್ಲಾ ಬಂದೋ
ಹಿರಿಯವೆಲ್ಲಾ ಹಾಡ್ತ್ತಿದ್ದೊ ಶೋಭಾನೆ ಪದ

ಅಪರೂಪದ ಹಾಡ್‌ನ ಕಿವಿಕೊಟ್ಟ್ ಆಲಿಸ್ಸವರ್‌ನ ನೋಡಿ
ವಾಲಗಕ್ಕೆ ಕುಣಿತ್ತಿದ್ದೋ ಒಂದು ಕಡೆಲಿ ಹಿರಿಯವೆಲ್ಲಾ
ಇನ್ನೊಂದು ಕಡೆಲಿ ಕುಣಿತ್ತಿದ್ದೋಹೈದ-ಗೂಡೆಗಳ ಜೋಡಿ

ವೀಡಿಯೋದವು ಹಿಡಿತ್ತಿದ್ದೋ ಕ್ಯಾಮರಾ
ಅದ್ರಲ್ಲಿ ಇದ್ದವರ ಫೋಟೋಗ ಅಮರಾ
ನಾಗೋಳಿ ಶಾಸ್ತ್ರ, ಪೆಟ್ಟಿಗೆ ನೋಡ್ದ್ ಆತ್
ಎಲ್ಲವೂ ಮದ್ವೆ ಗೂಡೆಗೆ ಮಾಡ್ತಿದ್ದೋ ತಮಾಸಿ

ಅವ್ಳ್ ಖುಷಿಂದ ನಗ್‌ತ್ತಿತ್ ಹುಸಿ ಹುಸಿ
ಇದ್ ನಡ್ದದ್ ಇರ್ಲ್‌ ಕಂಡ ಕನ್ಸ್‌ಲಿ
ಕನ್ಸ್‌ಲಿ ಒಮ್ಮೆಗೆ ಎಚ್ಚರ ಆತ್
ಮದ್ವೆ ಕನ್ಸ್‌ಲಿ ಮನ್ಸಾಗಿ ಪೊರ್ಲ್‌ಲಿ ಹೊತ್ತಾರೆ ನಡ್‌ತ್

# ಸೂಟೆ ಮತ್ತು ಶಿಕ್ಷಣ

'ಸೂಟೆ' ಹೇಳ್ರೆ ಈಗಿನ ಜನಗಳಿಗೆ ಬೇಗ ಅರ್ಥ ಆಕಿಲೆ. ಒಂದು ಕಾಲಲಿ ಅದು ಬಹಳ ಅಗತ್ಯದ ಒಂದು ವಸ್ತು. ಕತ್ತಲೆ ಆದ್ರೆ ಸಾಕು ಅಲ್ಲಿ ಇಲ್ಲಿ ದಾರಿಲಿ ಸೂಟೆಗ ಕಾಂಬೊತ್ತಿದ್ದೊ. ಜನಂಗ ಅದರ ಬೀಸಿ ಬೀಸಿ ಉರ್ಸಿ ನಡೆಕಾಕನ ಸಣ್ಣ ಮಕ್ಕ ಹೆದ್ರಿಕಂಡು ಅಲ್ಲಿ 'ಭೂತ' ಹೋದು ಕಂಡದೆ ಅಂತ ಹೇಳ್ತಿದ್ದೊ. ಹಾಗೆಂತ ಹೇಳಿ ದೊಡ್ಡವು ಮಕ್ಕಳ ಹೆದ್ರಿಸುತ್ತಾ ಇದ್ದ ಕಾಲ ಇತ್ತು. ಸೂಟೆನ ಜನಂಗ ಹಿಂದೆನ ಕಾಲಲಿ ಕತ್ತಲೆನ ದಾರಿಗಳ ನಡೆಕೆ ಉಪಯೋಗಿಸ್ತಿದ್ದೊ. ಜನ ಸೇರ್ವ ಜಾಗೆಲಿ, ಭೂತ ಕೋಲ ನಡಿವಲ್ಲಿ ಅದಕೆ ದೊಡ್ಡ ಮಹತ್ವ ಇತ್ತು. ಚಾಳೆಗರಿ, ಬೆದ್ರು ಕಮ್ಮುನ ಸಫೂರ ಕೋಲುಗಳ ಸಿಗ್ದು ತೆಗ್ದು ಸಣ್ಣ ಸಣ್ಣ ಕಟ್ಟುಗಳ ಮಾಡಿ ಅದ್ಕೆ ಕಿಚ್ಚಿಕೊಟ್ಟು ಜನಂಗ ತಮ್ಮ ಕೆಲ್ಸಗ ಮಾಡ್ತಿದ್ದೊ. ಅದು ದೊಂದಿನೋ, ಪಂಜಿನೋ ಎಂದು ಕರ್ಸಿಕಂಡು ಬಾತು. ಇದೆಲ್ಲ ಹಳೇ ಕತೆ. ಈಗ ನಮೊನಿ ನಮೊನಿ ಟಾರ್ಚುಗ ಪೇಟೆಗೆ ಬಂದ ಮೇಲೆ 'ಸೂಟೆ' ಬಹಳ ಅಪರೂಪ. ಆದ್ರೆ ಭೂತ ಕೋಲಲಿ ಮಾತ್ರ ಇದು ಇಂದಿಗೂ ತನ್ನ ಮಹತ್ವನ ಉಳ್ಸಿಕೊಂಡು ಉಟ್ಟು. ಅದು ಇಲ್ಲದೆ ಕೋಲನೆ ನಡೆಕಿಲೆ.

ಕತ್ತಲೆಲಿ 'ಸೂಟೆ' ಇಲ್ಲದೆ ಅಂದರೆ 'ಬೊಳ್ಪು' ಇಲ್ಲದೆ ನಡಿದು ಬಹಳ ಕಷ್ಟ. ನೀವು ತಡರ್ಸಿಕಂಡು ನಡೆಕಾದು ಮಾತ್ರ ಅಲ್ಲ ಎಡ್ಗಿ ಬಿದ್ದು ಕೈಕಾಲು ಹಲ್ಲು ಕೂಡ ಕಳ್ಕಂಬಕಾದು. ಅದೇ ರೀತಿ 'ಶಿಕ್ಷಣ' ಅಂದರೆ ಅಕ್ಷರ ಜ್ಞಾನ, ಓದು ಬರಹ ಲೆಕ್ಕಾಚಾರ ಇಲ್ಲದವರ ಕತೆ ಕೂಡ. ಹಾಗೆಂತ ಹೇಳಿ ಬರೀ ಶಿಕ್ಷಣ ಇದ್ದರೆ ಸಾಲ್ದು. ಅದರ ಹೇಂಗೆ ಬೊಳ್ಪು ನಂಗೆ ನೀವು ಪರಿವರ್ತಿಸಿಕಂಬರಿ ಎಂಬುದು ಬಹಳ ಮುಖ್ಯ ಸಂಗತಿ.

'ಶಿಕ್ಷಣ' ಅಕ್ಷರ ಜ್ಞಾನ, ಓದು ಬರಹ ಎಲ್ಲ ಹೇಂಗೆ ಹುಟ್ಟಿಕಂಡತು ಎಂಬುದರ ತಿಳ್ಕಂಬಕೆ ಬಹಳ ವಿಚಾರಗಳ ನಾವು ನೋಡಕಾದೆ. ಮೊನ್ಸನ ಇತಿಹಾಸ, ಅಂವ ಬೆಳ್ದು ಬಂದ ರೀತಿ ನೀತಿಗಳ ಅರ್ಥ ಮಾಡಿಕಣಕಾದೆ. ಈ ಸಣ್ಣ

ಲೇಖನಲಿ ನಾ ಅದರ ವಿವರಿಸಿ ಹೋದ್ಲೆ. ಆದರೆ ಕೆಲ ಸಂಗತಿಗಳ ಹೇಳಿಯೇ ಮುಂದೆ ಹೋನೆ. ಸಾವಿರಾರು ವರ್ಷಗಳ ಹಿಂದೆ ಮೊನ್ಸ ಕಲ್ಲು ಬಾಂಜಾರ ಗುಹೆಗಳಲಿ ಬದ್ಕಿಕಂಡ್ ಇತ್ತ್. ಅಂವ ಪುರುಷೋತ್ತು ಇರುಕಾಕನ ತನ್ನ ಕುಶಿ, ಮನ್ಸುನ ಭಾವನೆಗಳ ಹೇಳಿಕಂಬಕೆ ಗುಹೆನ ಗೋಡೆಗಳಲಿ ತಾನು ಬೇಟೆ ಆಡಿದ, ಕಂಡುಕಂಡ ಪ್ರಾಣಿ ಪಕ್ಷಿಗಳ ಚಿತ್ರ ಬರ್ತ್. ಹಾಂಗೆ ಮನ್ಸರ ಚಿತ್ರನೂ ಬರ್ತ್. ಕ್ರಮೇಣ ಅಂವ ತನ್ನ ದನಿಗಳಿಗೆ ಅರ್ಥ ಕೊಡುವ ಕೆಲರೇಖೆಗಳ ಕಂಡು ಕಂಡತ್. ಇಷ್ಟು ಹೊತ್ತಿಗೆ ಮಾನವ ಬದ್ಕಿದ್ದ ಸಮಾಜ ಬಹಳ ಮುಂದೆ ಸಾಗಿ ಬಂದಿದ್ದದೆ. ಗುಹೆ, ಕಲ್ಲು ಬಾಂಜಾರಗಳ ಒಳಗೆ ಇದ್ದಂವ ಬಯ್ಲ್‌ಗೆ ಬಂದು ಬೇಸಾಯ ಮಾಡುದರ ಕಲ್ತ್‌ಕಂಡತ್. ಅದರ ಅರ್ಥ 'ನಾಗರಿಕತೆ' ಸೃಷ್ಟಿ. ಅಂದರೆ ಇದೆಲ್ಲ ಸಾವಿರ ಸಾವಿರ ವರ್ಷದ ಮಾತು. ಮಾನವ ಕುಲದ ಎಷ್ಟೋ ತಲೆಮಾರುಗಳ ಕತೆ. ನಮ್ಮ ಚರಿತ್ರೆ ಪುಸ್ತಕಗ, ಅದರ್ಲಿ ಇರ್ವ ಸಂಗತಿಗಳ ಓದುದುಂತೇಳ್ರೆ ಕತೆ, ಕಾದಂಬರಿ, ಕಾವ್ಯದ ಹಾಂಗೆ. ಅದರ ಅರ್ಥ ನಮ್ಮ ನಾವೇ ತಿಳ್ಕಂಬೊದು.

ನಮ್ಮ ದೇಸಲಿ ಗುರು, ಗುರುನ ವಿದ್ಯಾಕೇಂದ್ರಗಳ ನೋಡುಕಾತಾದ್ರೆ ಬೌದ್ಧ ವಿಹಾರಗ, ವೈದಿಕ ಬ್ರಾಹ್ಮಣ ಕೇಂದ್ರಂದ ಮತ್ತೆ ಮುಸ್ಲಿಂ ಜನರ 'ಮದರಸ' ಇವುಗಳ ಚರಿತ್ರೆ ಓದೊಕು. ಆಗೆಲ್ಲ 'ವಿದ್ಯೆ' ಹೇಳ್ರೆ ಅದು ಆತ್ಮ, ಪರಮಾತ್ಮ, ಮೋಕ್ಷ ಒಟ್ಟಾರೆ ಆಧ್ಯಾತ್ಮ ವಿಚಾರಗಳಿಗೆ ಸೀಮಿತ ಆಗಿತ್ತ್. ನಿಜಕ್ಕೂ ನಮ್ಮಲ್ಲಿಗೆ 'ಆಧುನಿಕ' ಹೊಸಕ್ರಮದ 'ಶಿಕ್ಷಣ' ಶೈಕ್ಷಣಿಕ ವಿಚಾರಗಳ ಪರಿಚಯಿಸಿದವು ಬ್ರಿಟೀಷರ್. ಅವರ ಇನ್ನೂರು ವರ್ಷದ ಆಡಳಿತ ನಮ್ಮ ದೇಸಲಿ ದೊಡ್ಡ ಮಟ್ಟ್‌ನ ಸಾಮಾಜಿಕ ಬದಲಾವಣೆಗೆ ಕಾರಣ ಆತ್. ಕೇವಲ ದೊಡ್ಡವರ, ಮಡಿ ಜಾತಿಗಳ ಹಾಂಗೆನೆ ಗಂಡಸರಿಗೆ ಮಾತ್ರ ಸೀಮಿತ ಆಗಿದ್ದ 'ಶಿಕ್ಷಣ'ನ ಸಾಮಾಜದ ಎಲ್ಲಾ ವರ್ಗದ ಜಾತಿ, ಮತ, ಲಿಂಗ ಮೀರಿ ಸಾರ್ವತ್ರಿಕವಾಗಿಸಿದ ಕೀರ್ತಿ ಅವುಕೆ ಸಲ್ಲೊಕು. ಕೆಳಜಾತಿಗಂತೂ ಈ ವಿಷಯಲಿ ಅವುಕೆ ಚಿರಋಣಿ ಆಗಿರೊಕು.

'ಸೂಟೆ' ಹಿಡ್ದು ದಾರಿ ನಡ್ದರೆ ಬೊಳ್ಪು ಕಂಡದೆ ಸರಿ. ಆದರೆ ದಾರಿನ ಓರೆ ಕೋರೆ, ಏರು ತಗ್ಗು, ಕಲ್ಲುಮುಳ್ಳು, ಹೊಂಡ ಗುಂಡಿಗಳ ತಪ್ಪಿಸಿಕಂಡು ಹೋಕು ತೇಳ್ರೆ ಆಗಾಗ ಸೂಟೆನ ಬೀಸಿ ಬೀಸಿ ಉರಿ ಎಬ್ಬುಸೊಕು. ಹೆಚ್ಚೆಚ್ಚು ಕಿಚ್ಚಿ ಹೊತ್ತಿಕಂಡ್ ಹಾಗೆ ಮಾಡಿಕಣಕು. ಆಗ ನಡೆಕೆ ಸುಲಭ ಆದೆ. ಇದು ಗೊತ್ತಿಲ್ಲದವು ಕೈಲಿ ಸೂಟೆ ಇದ್ದರು ಗುಂಡಿಗೆ ಬೀಳುದು, ದಾರಿ ತಪ್ಪುವುದು ಆಕಂಡು ಇದ್ದದೆ. ಅದ್ಕೆಲ್ಲ ಅಂವ ಇದು ನನ್ನ ಹಣೆಬರ, ವಿಧಿ, ಪೂರ್ವ ಜನ್ಮದ ಕರ್ಮಂತ ಹೇಳಿಕಂಡು ಮತ್ತಷ್ಟು ಗುಂಡಿಗೆ ಬಿದ್ದದೆ. ಇದರೆಲ್ಲ ನಮ್ಮ ಶಿಕ್ಷಣಕ್ಕೂ ಹೋಲಿಸಿ ನೋಡೋಣ.

ತುಂಬಾ ಜನಕ್ಕೆ 'ಶಿಕ್ಷಣ' ಹೇಳ್ರೆ ಓದುದು-ಬರಿವುದು ಮಾತ್ರ. ಹೆಚ್ಚುತೇಳ್ರೆ ಅದು ಯಾವುದಾದರೂ ಉದ್ಯೋಗಕ್ಕೆ ದಾರಿ. ಆದರೆ ಶಿಕ್ಷಣದ ಉದ್ದೇಶ ಅದು ಮಾತ್ರ ಅಲ್ಲ. 'ಶಿಕ್ಷಣ' ಎಂದರೆ ಬದಲಾವಣೆ, ಹೊಸ್ತುನ ಕಾಂಬೊದು ಅದರ ನಿಜ ಅರ್ಥ. ಮೊನ್ಸ ಪಶುತ್ವಂದ ಮೇಲೆದ್ದು ನಿಜ ಮಾನವ ಆದು ಅದರ ಪರಮಗುರಿ. ಅದು ವಿಚಾರ ಶೀಲತೆ, ವೈಚಾರಿಕತೆಗಳ ಓದಿದವನ ಮನ್ಸುಲಿ ಹುಟ್ಟುವಾಂಗೆ ಮಾಡೊಕು. ಬೀಸಿ

ಬೀಸಿ ಸೂಟೆನ ಹಿಡ್ದು ನಡಿವಾಂಗೆ 'ಶಿಕ್ಷಣ'ನ ಜೀವನದ ಎಲ್ಲ ಆಗು ಹೋಗುಗಳಿಗೆ ಅನ್ವಯಿಸಿಕಣೊಕು. ಅಧು ಮೂಢತೆ, ಅಂಧ ಶ್ರದ್ಧೆಗಳ ಬದಿಗೆ ಸರಿಸಿ ವೈಜ್ಞಾನಿಕ ದಾರಿಗಳಲಿ ನಮ್ಮ ಮುನ್ನೆಡೆಸುವಾಂಗೆ ಮಾಡೋಕು. ಅದುವೇ ಸುಖಶಾಂತಿ ನೆಮ್ಮದಿಯ ಬದ್ಕುಗೆ ಹೆದ್ದಾರಿ.

ಶಿಕ್ಷಣವಂತ ಜನಂಗ ಇಂದ್‌ಮೂಢನಂಬಿಕೆಗಳ ದಾಸಾನುದಾಸರಾಗಿ ತಾವು ಕೆಟ್ಟ್‌ದ್ ಮಾತ್ರ ಅಲ್ಲ; ಸಮಾಜನ ಕೆಡ್ಸುತ ಒಳೊ. ನಾವು ಸಮಾಜಲಿ ಕಾಣುವ ಅಂಧತೆ, ಅತಿಯಾದ ಜಾತಿಯತೆ; ಮತ-ಧಾರ್ಮಿಕತೆ ನಂಬಿಕೆಗಳೆಲ್ಲ ಕೋಮುವಾದ ಜನಾಂಗವಾದಗಳ ಹುಟ್ಟಿಗೆ ಕಾರಣ ಆಗಿ ಮಾನವ ಸಮಾಜ ಕತ್ತಲ ಕಾಲಕ್ಕೆ ಅಂದರೆ ಅನಾಗರಿಕ ಕಾಲಕ್ಕೆ ಹಿಂದೆ ಹೋಗ್ವಹಾಂಗೆ ಮಾಡ್ತ ಉಟ್ಟು. ಇವುಗಳ್‌ಂದ ನಮ್ಮ ಸಮಾಜ ಆದಷ್ಟು ಬೇಗ ಬಿಡುಗಡೆ ಪಡ್ಕಣಕು. ಆಗ ಮಾತ್ರ ನಾವು ಪಡ್ದ 'ಶಿಕ್ಷಣ' ಕ್ಕೆ ಅರ್ಥ ಬಂದದೆ.

## ಯಾಕೀ ಕತೆ ಹೀಂಗಾತ್?

**ಕುತ್ಯಾಳ ನಾಗಪ್ಪ ಗೌಡ (ಕಿರಣ)**

ಬೂಮಿಯ ಮಗಳ ಕಾಡಿಲಿ ನೋಡಿ
ಕುಂಡಚ್ಚಂಗೆ ತಲೆ ಬಿಸಿಯಾಗಿ
ಅತ್ತಾ ಇತ್ತ ಮೇಲೆ ಕೆಳಗೆ
ಸುತ್ತಾ ಮುತ್ತ ಓಡಾಡ್ತಿತ್ತ್;
ಮರ್ಟ್ ಮರ್ಟ್ ಕೇಳ್ವಾಂಗಿತ್ತ್;
ಯಾಕೀ ಕತೆ ಹೀಂಗಾತ್?

ಸೇತುವೆ ಕಟ್ಟಿಕೆ ಹೊಯಿಗೆಯ ಹೊತ್ತೊಳೆ,
ನಗ್‌ತಿತ್ತಂದ್ ಕಡಲ ತೆರೆ;
ರಾಮದೇವರೇ ಹೊಗಳಿದೊ ಮತ್ತೆ
ಬೆನ್ನ್‌ಲಿ ಬರ್ದೊ ಮೂರು ಗೆರೆ.
ಅಂತದ್ ಹೋಗಿ ಈ ಗತಿ ಬಾತ್;
ಯಾಕೀ ಕತೆ ಹೀಂಗಾತ್!

ರಾಮ ಸ್ವಾಮಿಗ ಹೂಗಳ ನೋಡಿ
ನಿಂತಲ್ಲೇ ನಿಂತಿರ್ತಿದ್ದೊ;
ಸೀತೆಯ ದನಿಯೋ ಕೋಗಿಲೆ ದನಿಯೋ
ತಿಳಿಯದೆ ಸುಮ್ಮನೆ ಒಸಿ ನಗ್ತಿದ್ದೊ;
ಅಂತದ್ ಹೋಗಿ ಈ ಗತಿ ಬಾತ್;
ಯಾಕೀ ಕತೆ ಹೀಂಗಾತ್!

ಸಣ್ಣಂವ ದೊಡ್ಡಂವ ಅಂಗದ ಜಾಂಬವ
ಕಾಡಿಗೆ ಕಾಡೇ ಸೈನಿಕರಾಗಿ
ಪುಡಿ ಪುಡಿ ಮಾಡ್ದೊ ಲಂಕೆಗೆ ಹೋಗಿ;
ಕದ್ದಂವ ಕಳ್ಳ ಸತ್ತೇ ಹೋತ್;
ರಾವಣ ಸತ್ತರು ಕತೆ ಹಿಂಗಾತ್!
ಪರೀಕ್ಷೆಗೊಡ್ಡಿದ ಕೆಂಡದ ರಾಸಿಯ
ಉರಿಯೋ ನಾಲಿಗೆ ಹೂವಾಗಿತ್ತ್;

ಸೀತೆಯ ಪಾದಕೆ ತಂಪಾಗಿತ್ತ್;
ಹುಟ್ಟಿದ ಸಂಶಯ ಸುಟ್ಟೇ ಹೋತ್;
ಆದರು ಯಾಕೀ ಕತೆ ಹೀಂಗಾತ್?
ಎಲ್ಲೋ ಯಾರೋ ಏನೋ ಹೇಳಿರೆ

ಸೀತೆಗೆ ಈ ಗತಿ ಯಾಕೆ?
ಮಾಡದ ತಪ್ಪಿಗೆ ಕಾಡಿನ ವಾಸ;
ನುಂಗುವ ಕತ್ತಲೆ; ಚಂದ್ರನೆ ದೀಪ!
ಕರುಣೆಗು ಬರವೆ ಅಯ್ಯೋ ಪಾಪ!
ಅರಮನೆ ಬುಟ್ಟ್ ಕಾಡಿಗೆ ಬಾತ್;
ನಂಬುದೆ ಕಷ್ಟ, ಯಾಕ್ಹೀಂಗಾತ್!

●

# ಅರೆಭಾಷಾ ಅಕ್ಷರ ಮಾಲೆ

**ವಿದ್ವಾನ್ ಟಿ.ಜಿ. ಮುಡೂರು ಪಂಜ**

*['ಸರಳಕನ್ನಡ ಸಂಕ್ಷಿಪ್ತ ಲಿಪಿಗಳು' ಗ್ರಾಂಥಿಕ ಕನ್ನಡಲಿ ಮುಡೂರು ಅವು ನಾಲ್‌ಕೆಯಿದ್ ವರ್ಸಗಳ ಹಿಂದೆ ಬರ್‌ದ ಲೇಖನ ಇದ್ ಕೆಲ ಪತ್ರಿಕೆಗಳಲಿ ಕರಪತ್ರಗಳಲಿ ಆಸಕ್ತರ ಗಮನಕ್ಕೆ ಬಂದಿರುದು. ಗ್ರಾಂಥಿಕ ಕನ್ನಡಲಿ ಬಳಕೆಲಿರುವ 52 ಅಕ್ಷರ ಲಿಪಿಗಕ್ಕೆ ಒಂದೆರಡ್ ಸಂಕೇತಗಳ ಹಚ್ಚಿ 26 ಲಿಪಿಗಳಲಿ ಬರೆವ ಪ್ರಯೋಗ ಇದ್. ಅರೆಬಾಸೆಗೆ ಹೆಚ್ಚ್ ಸೂಕ್ತಂತ ಇದರ ಮೂಲ ಲೇಖಕರೇ ಅರೆಬಾಸೆಗೆ ಅನುವಾದಿಸಿ ಕೊಟ್ಟದರ ಹಿಂಗಾರಲಿ ಕೊಟ್ಟಿರುದು] – ಸಂ.*

ಸಂವಹನ ಮಾಧ್ಯಮಲಿ ಬಾಸೆ ಮೊದಲನೆಯದ್. ಶಬ್ದಲಿ ಪ್ರಕಟಆವ ಬಾಸೆನ ಶಾಶ್ವತ ಆಗಿ ಉಳ್ಸಿಕಂಬಕೆ ಬಳ್‌ಸಿಕಂಡ 'ಲಿಪಿ' ಬರೆಹಗ ಮಾನವನ ನಾಗರಿಕತೆಯ ಮೆಟ್ಟಲುಗ. ವಿವಿಧ ಪ್ರಾಣಿ ಪಕ್ಷಿಗ ತಮ್ಮ ಬಯ್‌ಕೆನ ಗೊತ್ತುಮಾಡ್‌ವ ಅವುಗಳ ಕೂಗ್, ಹಾಡ್ ಅವುಗಳ ಬಾಸೆಆದರೂ ಅವುಕೆ ಲಿಪಿಗಳಿಲ್ಲೆ. ಭಾವನೆಗಳ ಹೊರ ಹಾಕುವ ಉದ್ಗಾರಗಳೆಲ್ಲವ ಇಂದ್ ಬಳ್‌ಸುವ ಲಿಪಿಗ ವ್ಯಕ್ತಪಡಿಸಿಕೆ ಸಾಕಾಗದ್. ಲೋಕಲಿ ಕಡಿಮೆ ಸಂಕೆಯ ಲಿಪಿಗಳ ಜತೆ ಅಧಿಕ ಸಂಖೆಯ ಲಿಪಿ ಭಾಷೆಗ ಹಲವೊಳೊ. ಕಡಿಮೆ ಸಂಕೆಲಿ ಇರ್‌ವ ಲಿಪಿಗಳ ಗುರ್‌ತಿಸಿಕೆ, ಬರೆಕೆ, ಕಡಿಮೆ ಕಾಲಾವಕಾಶ ಸಾಕಾದರೆ ಅಧಿಕ ಸಂಕೆಯ ಲಿಪಿಗಳ ಕಲಿಯಕೆ ಹೆಚ್ಚಿನ ಶ್ರಮ ಕಾಲಾವಕಾಶ ಬೇಕಾದೆ. ಇದರ್‌ಂದ ಹೊಸ ಬಾಸೆನ ಕಲಿಯಕೆ ಸುಲಭ ಆವಹಾಂಗೆ ಬಳಕೆಲಿರುವ ಬಾಸೆ ಲಿಪಿಗಳ ರೂಪ ಕೆಡಿಸದೆ ಸಂಕ್ಷೇಪಗೊಳಿಸುದು ಇಂದಿನ ಅಗತ್ಯನೂ ಹೌದು.

ಜಗತ್ತಿಲಿ ಬಳಕೆಯ ಭಾಷೆಗ ಹಲವಿದ್ದರ್‌ೀ ಅವುಕೆ ತಮ್ಮದೇ ಆದ ಲಿಪಿ ಇರ್‌ದು ಕೆಲವ್‌ಕೆ ಮಾತ್ರ. ರೋಮನ್ ಬ್ರಾಹ್ಮೀ ದೇವನಾಗರಿ ಲಿಪಿಗಳಲಿ ಬ್ರಾಹ್ಮಿ ಮೂಲದ ಕನ್ನಡ, ತೆಲುಗು, ತಮಿಳ್, ತುಳು, ಮಲೆಯಾಳಗಳಲಿ ತುಳುನ ಬುಟ್ಟು ಉಳಿದವಕ್ಕೆ ಬೇರೆನೆ ಲಿಪಿ ಉಟ್ಟು. ತುಳುಲಿ ಇತ್ತೀಚೆಗೆ ಕೆಲ ಓಲೆಗರಿಯ ಗ್ರಂಥಗ ಸಿಕ್ಕುಟು, ಅವುಗಳಲಿ ಬಳಕೆ ಆಗಿರ್‌ವ ಮಲೆಯಾಳಕೆ ಹೆಚ್ಚ್ ಹತ್ತರ ಇರ್ವ ತುಳು ಲಿಪಿಯ ಗುರ್‌ತಿಸಿ ಅದರ ಬಳಕೆಗೆ ತಾವ ಕೆಲಸಗಳಾದವೆ. ಭಾಷೆಗೆ ಅದರದೇ ಆದ ಲಿಪಿ ಇಲ್ಲದರ್‌ಂದ ಅದರ ಹಿರಿಮೆ ಗರಿಮೆಗೆ ಚ್ಯುತಿಯಿಲ್ಲೆ. ಇಂದ್ ವಿಪುಲ ಸಾಹಿತ್ಯ ಸಂಸ್ಕೃತಿ ಇರ್‌ವ ತುಳುವಿಗೆ ಕನ್ನಡ ಲಿಪಿ ಬಳಕೆಲಿ ಉಟ್ಟು. ತುಳುಲಿ ಪಠ್ಯಪುಸ್ತಕಗ ರಚನೆ ಆಗಿ ತುಳುಕಲೆಕೆ ಶಾಲೆಗಳಲಿ ಸುರು ಆಗುಟು. ತುಳು ಸಾಹಿತ್ಯ ಸಾಂಸ್ಕೃತಿಕ ಕಲಾ ಸಂಘಸಂಸ್ಥೆಗ ತುಳುವಿಗೆ ರಾಷ್ಟ್ರೀಯ ಸ್ಥಾನಮಾನಗಳ ಬೇಡಿಕೆ ಇಟ್ಟೊಳೊ. ಕಳೆದೆರಡ್ ದಶಕಂದ ಪ್ರಾಚೀನ ತುಳು ಸಾಹಿತ್ಯ ಸಂಸ್ಕೃತಿ ಜಾನಪದ ಕಲಾ ಸಂಪತ್ತಿನ ಜತೆ ಹೊಸ ಸಾಹಿತ್ಯನೂ ಸೃಷ್ಟಿಯಾದೆ. ಇವೆಲ್ಲವ ತುಳು ಆಡಬಲ್ಲವರೆಲ್ಲ ಕನ್ನಡಲಿ ಓದಿ ಪಡ್‌ದವೆ.

ಸಂಸ್ಕೃತ ಭೂಯಿಷ್ಠ ಅಲ್ಲದ ತುಳು ಆಡುನುಡಿಯ ತುಳು ಬರೆಯಕೆ ಕನ್ನಡ ಸರಳ ಸಂಕ್ಷಿಪ್ತ ಲಿಪಿ ಅಳವಡಿಸಿಕೊಂಡರೆ ಕನ್ನಡಲಿ ಬರೆವ ತುಳುವರಿಗೆ ತುಳುವಿನಲಿ ಬರೆವ ಕನ್ನಡಿಗಕ್ಕೆ ಮಾತ್ರ ಅಲ್ಲ ಕನ್ನಡ ಲಿಪಿಗೆ ಕಸಿಕಟ್ಟಿದ ಈ ಹೊಸತಳಿಯ ಫಲ ಕನ್ನಡ ಲಿಪಿನ ಬಳ್‌ಸಿಕನ ಕೊಂಕಣಿ, ಮಲೆಯಾಳ, ಕೊಡವ, ಕುಂದಕನ್ನಡ–ಅರೆಕನ್ನಡ–ಹವಿಗನ್ನಡಲಿ ಬರೆವವುಕ್ಕೆ ಓದುವವುಕ್ಕೆ ದೊರೆತ್ತದೆ. ಈ ಕನ್ನಡ ಲಿಪಿಗಳ ಸರಳ ಸಂಕ್ಷೇಪಗೊಳ್‌ಸುದು ಬೇರೆ ಬಾಸೆಗಳ ಸಂವಹನಕ್ಕೆ ಮಾತ್ರ ಅಲ್ಲ–ಕನ್ನಡಕ್ಕೂ ಇಂದ್ ಅಗತ್ಯಂತ ಹೇಳಕ್.

ಕನ್ನಡಲಿ ಪ್ರಾಚೀನ ಹಳೆಗನ್ನಡ–ಹಳೆಗನ್ನಡ–ನಡುಗನ್ನಡ–ಹೊಸಗನ್ನಡಗ ಕಾಲಕಾಲಕೆ ಬಾಸೆ ಜತೆ ಅದರ ಲಿಪಿವರ್ಣಮಾಲೆನೂ ಬದಲಾವುಟು. ಸಂಸ್ಕೃತ ವೈಯ್ಯಾಕರಣಿಗ ಸಂಸ್ಕೃತ ಭಾಷಾನಿಯಮವ ಕನ್ನಡಕೂ ಅಳವಡಿಸಿಕಂಡ ಕಾರಣ ಕನ್ನಡದೆ ಆದ ವ್ಯಾಕರಣ ಇದ್‌ವರೆಗೆ ಸಿದ್ಧಿಯಾತಿಲ್ಲೆ. ಸಂಪ್ರದಾಯದ ಅಡ್ಡ ಇದ್ದರೂ ಕಾಲದ ಪ್ರವಾಹಕ್ಕೆ ಅದ್ ಅಲ್ಪ ಪ್ರಮಾಣಲಿ ಬದಲಾದದ್ ಕಂಡದೆ. ಹಳೆಗನ್ನಡದ ರಳ (ಱ) ಕುಳ (ೞ)ಗಳ ಅದು ಕಳ್‌ದ್‌ಕೊಂಡುಟು. ವ್ಯಂಜನಗಳಲಿ ಮಹಾಪ್ರಾಣಗ ಅನಗತ್ಯಂತ ಕನ್ನಡದ ಹಿಂದಿನ ವೈಯ್ಯಾಕರಣಿಗ ಹೇಳ್‌ತಾ ಬಂದಿದ್ದರ್‌ೀ ಅದ್ ಇಂದಿಗೂ ಉಳ್ಕೊಂಡು ಬಂದುಟ್ಟು. ಋ ಷ ವಿಸರ್ಗ (ಃ)ಗ ಇಂದ್ ಬೇಕಿಲ್ಲೆಂತ ಹೊಸ ಭಾಷಾ ಶಾಸ್ತ್ರಜ್ಞರ್ ಹೇಳ್ತಿದ್ದರ್‌ೀ ಅವು ಬಳಕೆಲಿ ಉಟ್ಟು. ಲಿಪಿಗಳ ನವೀಕರಣಕೆ ಸಂಪ್ರದಾಯದ ಅಡ್ಡ ಇದ್ದರ್‌ೀ ಈ ದೆಸೆಲಿ ಹೊಸ ಹೆಜ್ಜೆ ಗುರುತುಗ ಮೂಡುತ್ತಲೇ ಉಟ್ಟು. ಇತ್ತೀಚೆಗೆ ಕನ್ನಡ ಲಿಪಿ ಸುಧಾರಣೆಲಿ ಕೆಲ ಪತ್ರಿಕೆಗ ವಿದ್ವಾಂಸರ ಬರೆಹಕೆ ಎಡೆಮಾಡಿರುದು ಕಂಡದೆ. ಪ್ರಕಟಿತ ಲೇಖನಗಳ್‌ಗೆ ಬಂದ ಪ್ರತಿಕ್ರಿಯೆಗ ಲಿಪಿಯ ಆವಿಷ್ಕಾರಕ್ಕೆ ಹೆಚ್ಚು ಒತ್ತು ಕೊಟ್ಟವೆ.

ಹೊಸಗನ್ನಡಲಿ ಮೊತ್ತ ಮೊದಲ್ ಇದಕ್ಕೆ ಕೈ ಹಚ್ಚಿದವು ಕನ್ನಡದ ಕಣ್ವ ಬಿ.ಯಂ.ಶ್ರೀ ಅವರ್. ಕನ್ನಡ ವರ್ಣಮಾಲೆಯ ಸಂಯುಕ್ತಾಕ್ಷರ ಮತ್ತ್ ಒತ್ತಕ್ಷರಗಳ ಸಡಿಲಿಸಿದ ಪ್ರಯೋಗಅದ್. ಕನ್ನಡ (ಕನ್‌ನಡ) ಕತ್ತಲೆ (ಕತ್‌ತಲೆ) ಅಂತ ಬರ್‌ದಾಗ ಇಲ್ಲಿ ಸಜಾತಿ ಒತ್ತಕ್ಷರಗ ಅಗತ್ಯ ಇಲ್ಲೆ. ಮತ್ಸ್ಯ (ಮತ್‌ಸಯ) ಸೂರ್ಯ (ಸೂರ್‌ಯ) ಈ ರೀತಿಲಿ ಬರ್‌ದಾಗ ವಿಜಾತಿ ಒತ್ತಕ್ಷರಗಳ ಸಂಕೇತಗಇಲ್ಲೆ. ಅಕ್ಷರ ಪದಗಳ ಸರಪಳಿ ಸರಿಯಾಗಿ ಕೂಡಿ ಬಂದದೆ. ಉದಾಃ ರಾಜ್ಯೋತ್ಸವವಾಗಲಿ ಕನ್ನಡೋತ್ಸವ, ನಾಡು ನುಡಿ ಸಂಸ್ಕೃತಿಗೆ ಹೆಚ್ಚಿನ ಮಹತ್ವವಿರಲಿ, (ರಾಜ್‌ಯೋತ್‌ಸವವಾಗಲಿ ಕನ್‌ನಡೋತ್‌ಸವ. ನಾಡು ನುಡಿ ಸಂಸ್‌ಕ್‌ರ್‌ತಿಗೆ ಹೆಚ್‌ಚಿನ ಮಹತ್‌ವವಿರಲಿ) ಈ ರೀತಿ ಸಂಯುಕ್ತಾಕ್ಷರ ಪದಗಳ ವಿಂಗಡಿಸಿ ಬರೆಕನ ಅಕ್ಷರಗಳ ಪುನರಾವರ್ತನೆಂದ ಒಸಿ ತಡವರ್‌ಸಿದರ್‌ೀ ಅಭ್ಯಾಸ ಬಲಂದ ಮುಂದೆಗೆ ಓದು ಬರೆಹ ಸರಾಗವಾದೆ. ಈ ರೀತಿ ವಿಂಗಡನೆಂದ ಪಂಕ್ತಿ ಒಸಿ ಉದ್ದ ಆದರೂ ಒತ್ತಕ್ಷರಗ ಇಲ್ಲದ ಕಾರಣ ಪಂಕ್ತಿಗಳ ಸಂಖ್ಯೆ ಹೆಚ್ಚಿ ಆಗಿ ಸಮಾನತೆ ಕಾಯ್ದುಕೊಂಡದೆ.

ಪ್ರಕೃತ ಬಿ.ಯಂ.ಶ್ರೀ. ಪ್ರಯೋಗನ ಮುಂದಿಟ್ಟ್‌ಕಂಡು ಕಂಪ್ಯೂಟರ್‌ಲಿ ಇರ್‌ವ ಸಂಕೇತಗಳ್‌ಂದ ತಕಂಡ ಎಲ್ಲಾ ಸ್ವರ ವ್ಯಂಜನಗಕ್ಕೆ ಏಕರೂಪದ ದೀರ್ಘ (।) ಲಿಪಿಪಲ್ಲಟ (<) ಸಂಕೇತಗಳ ಹಚ್ಚಿದ ಹೊಸ ಪ್ರಯೋಗ ಇದ್. ಹ್ರಸ್ವ ಸ್ವರ ವ್ಯಂಜನಗಕ್ಕೆ ಹಚ್ಚುವ ದೀರ್ಘ (।) ಸಂಕೇತಗಳ್‌ಂದ ಅವುಗಳ ಸಾಮ್ಯತೆ ಉಳ್‌ದದೆ. ಲಿಪಿ ಪಲ್ಲಟ (<) ಸಂಕೇತಂದ ವರ್ಗೀಯ ಅವರ್ಗೀಯ ವ್ಯಂಜನಗಳಲಿ ಹಲವು ಲಿಪಿಗಳ ಬಳಕೆ ಅಗತ್ಯ ಇಲ್ಲೆ. ಈ ಸಂಕೇತಗಳ ಹಚ್ಚಿ 26 ಲಿಪಿಗಳಲಿ ಮೂಲ ರೂಪ ಕೆಡದ 52 ಅಕ್ಷರಗಳ ಗುರ್‌ತಿಸಕ್. ಸಂಕೇತಗಳಿಂದ ಗುರುತಿಸುವಿಕೆಯ ಸರಳ ಕನ್ನಡ ಸಂಕ್ಷಿಪ್ತ ಲಿಪಿ ತಖ್ತೆಯ ಪ್ರತ್ಯೇಕ ಕೊಟ್ಟುಟು. ಇದ್ ಒಂದು ಪ್ರಯೋಗ ಮಾತ್ರ. ಇದ್ರಲಿ ಬಳಸಿದ ಸಂಕೇತಗಳ ಬದ್ಲಾಗಿ ಹೊಸ ಸಂಕೇತಗಳ್‌ಂದ ಸುಧಾರಣೆಯ ಕಂಪ್ಯೂಟರ್ ತಂತ್ರಜ್ಞರ್ ಮಾಡಿರೆ ಹೆಚ್ಚು ಪರಿಣಾಮಕಾರಿಯಾಗಕ್.

## ಅರೆಭಾಷಾ ಸಂಕ್ಷಿಪ್ತ ಲಿಪಿಬಳಕೆಲಿ ಸಂಕೇತಗ
## ದೀರ್ಘ (।) ಲಿಪಿ ಪಲ್ಲಟ (<)

**ಪ್ರಕೃತ ಸ್ವರಗ:** ಅ ಆ ಇ ಈ ಉ ಊ ಋ ೠ
ಎ ಏ ಐ ಒ ಓ ಔ ಅಂ ಅಃ

**ಸರಳೀಕೃತ ಸ್ವರಗ:** ಅ ಅ। ಇ ಇ। ಉ ಉ। ಋ ಋ।
ಎ ಎ। ಅಯ್ ಒ ಒ। ಅವ್ ಅಂ ಅಃ

**ಪ್ರಕೃತ ವ್ಯಂಜನಗ:** ಕ ಕಾ ಕಿ ಕೀ ಕು ಕೂ ಕೃ ಕೄ
ಕೆ ಕೇ ಕೈ ಕೊ ಕೋ ಕೌ ಕಂ ಕಃ

**ಸರಳೀಕೃತ ವ್ಯಂಜನಗ:** ಕ ಕ। ಕಿ ಕಿ। ಕು ಕು। ಕ್‌ರ್ ಕ್‌ರ್।
ಕೆ ಕೆ। ಕೆಯ್ ಕೊ ಕೊ। ಕವ್ ಕಂ ಕಃ

| **ಪ್ರಕೃತ ವರ್ಗೀಯ ವ್ಯಂಜನಗ** | | | | | **ಸರಳೀಕೃತ ವರ್ಗೀಯ ವ್ಯಂಜನಗ** | | | | |
|---|---|---|---|---|---|---|---|---|---|
| **ಅಲ್ಪ ಪ್ರಾಣ** | **ಮಹಾ ಪ್ರಾಣ** | **ಅಲ್ಪ ಪ್ರಾಣ** | **ಮಹಾ ಪ್ರಾಣ** | **ಅನು ನಾಸಿಕ** | **ಅಲ್ಪ ಪ್ರಾಣ** | **ಮಹಾ ಪ್ರಾಣ** | **ಅಲ್ಪ ಪ್ರಾಣ** | **ಮಹಾ ಪ್ರಾಣ** | **ಅನು ನಾಸಿಕ** |
| ಕ | ಖ | ಗ | ಘ | ಙ | ಕ | ಕ< | ಗ | ಗ< | ಙ |
| ಚ | ಛ | ಜ | ಝ | ಞ | ಚ | ಚ< | ಜ | ಜ< | ಞ |
| ಟ | ಠ | ಡ | ಢ | ಣ | ಟ | ಟ< | ಡ | ಡ< | ಣ |
| ತ | ಥ | ದ | ಧ | ನ | ತ | ತ< | ದ | ದ< | ನ |
| ಪ | ಫ | ಬ | ಭ | ಮ | ಪ | ಪ< | ಬ | ಬ< | ಮ |

**ಪಕೃತ ಅವರ್ಗೀಯ ವ್ಯಂಜನಗ:** ಯ ರ ಲ ವ ಸ ಶ ಷ ಹ ಳ
ಹಳೆಗನ್ನಡದ ರಳ (ಱ) ಕುಳ (ೞ)

**ಸರಳೀಕೃತ ಅವರ್ಗೀಯ ವ್ಯಂಜನಗ**

ಶ(ಸ<) ಷ(ಸ>) ಳ(ಲ<) ಣ(ನ<) ಱ (ರ್<) ೞ (ರ<) ಕುಳ(ಲ>)

**ಸಂಕೇತಗಳ್ಂದ ಲಿಪಿ ಪಲ್ಲಟ**

ಹ್ರಸ್ವವ ದೀರ್ಘಗೊಳಿಸುದು : ಕಾಸರಗೋಡು (ಕıಸರಗೊıಡು) ಬಾಯಾರಿಕೆ(ಬıಯıರಿಕೆ)

ಸಜಾತಿ ವ್ಯಂಜನಗಳಿಗೆ ಒತ್ತ್ : ಅಕ್ಕ (ಅಕ್ಕ) ಅಮ್ಮ (ಅಮ್ಮ) ಕನ್ನಡ(ಕನ್ನಡ)

ವಿಜಾತಿ ವ್ಯಂಜನಗಳ ವಿಂಗಡಿಸುದು: ಬೆಳ್ತಂಗಡಿ (ಬೆಲ್<ತಂಗಡಿ) ಸುಳ್ಯ (ಸುಲ್<ಯ) ಸುಬ್ರಹ್ಮಣ್ಯ(ಸುಬ್ರಹಮ್ಣ್ಯ)

**ಸಂಕೇತಗಳ ಹಚ್ಚಿದ ಸರಳೀಕೃತ ಸಂಕ್ಷಿಪ್ತ ಲಿಪಿಗಳಲಿ ಕೆಲ ಬಾಪೆಗ**

**ಕನ್ನಡ–**

ಕರ್ನಾಟಕದ ಸಾಂಸ್ಕೃತಿಕ ಭೂಮಿಕೆಯಲ್ಲಿ ಎಲ್ಲರೂ ಮೆಚ್ಚುವಂತಹ ಒಂದು ಕವಲೆಂದರೆ ದಾಸ ಸಾಹಿತ್ಯ

ಕರ್ನıಟಕದ ಸıಂಸ್ಕ್ರ್ತಿಕ ಬು<ಮಿಕೆಯಲ್ಲಿ ಎಲ್ಲರುı ಮೆಚ್ಚುವಂತಹ ಒಂದು ಕವಲೆಂದರೆ ದıಸ ಸıಹಿತ್ಯ

**ತುಳು–**

ಕುಲೆತ್ತ ಅಜನೆ..! ದೂಮಣ್ಣೆ ನಡಿರ್ಲ್ ಪೊರ್ತುಗು ಗುಡ್ಡೆದ ತಾದಿಟ್ ಪೋವೊಂದುಲ್ಲೆ ದಾದನಾ ಅನಿವಾರ್ಯ.

ಕುಲೆತ್ತ ಅಜನೆ...! ದುıಮನ್ನೆ< ನಡಿರ್ಲ್ ಪೊರ್ತುಗು ಗುಡ್ಡೆದ ತıದಿಟ್ ಪೊıವೊಂದುಲ್ಲೆ ದıದನı ಅನಿವıರ್ಯ

**ಕೊಂಕಣಿ–**

ಕೋಮಾರ್ ಪಂತ್ ಲೋಕಾಕ್ ಅನಿ ಏಕ್ ನಾಂವ್ ಕೋಮಾರ್ ಪೈಕ್

ಕೊıಮıರ್ ಪಂತ್ ಲೊıಕıಕ್ ಅನಿ ಎıಕ್ ನıಂವ್ ಕೊıಮıರ್ ಪಯ್ಕ್

**ಕುಂದ ಕನ್ನಡ–**

ನಿಮ್ಗ್ ಗುಡ್ಣ ಆಡುಕ್ ಬತ್ತಾ..? 'ಗುಡ್ಣ' ಅಂದ್ರೆ ಕಲ್ಲೆಂಗ್ ಆಡು ಆಟ

ನಿಮ್ಗ್ ಗುಡ್ನ< ಅıಡುಕ್ ಬತ್ತı..? 'ಗುಡ್ನ<' ಅಂದ್ರೆ ಕಲ್ಲೆಂಗ್ ಅıಡು ಅıಟ

**ಹವ್ಯಕ ಹವಿ ಕನ್ನಡ–**

ಅಪ್ಪೋ ಕೇಳಿತ್ತೋ, ಮಾಣಿ ಎಲ್ಲಿ ಹೋಯ್ದಾ..? ಹೋಪಾಗ ಹೇಳಿಕ್ಕಿ ಹೋಪಲೆ ಅವಂಗೆ ಎಂತ ಸಂಕ್ಟ!

ಅಪ್ಪೊı ಕೆıಲಿ<ತ್ತೊı ಮıನಿ< ಎಲ್ಲಿ ಹೊıಯ್ದı..? ಹೊıಪıಗ ಹೆıಲಿ<ಕ್ಕಿ ಹೊıಪಲೆ ಅವಂಗೆ ಎಂತ ಸಂಕ್ಟ !

**ಗೌಡ ಅರೆ ಕನ್ನಡ–(ಅರೆಭಾಷೆ)**

ಹೇಂಗೊಳರಿ ಭಾವ ! ಹೇಳೊಕು ಸಮಾಚಾರ – ಹೇಂಗುಟ್ಟು ಈಗ ಮಂಜನ ಕಾರುಭಾರ

ಹೆ|ಂಗೊಲ<ರಿ ಬ|<ವ ಹೆ|ಲೊ<ಕು ಸಮ|ಚ|ರ– ಹೆ|ಂಗುಟ್‌ಟು ಇ|ಗ ಮಂಜನ ಕ|ರುಬ<|ರ

ಇದೇ ರೀತಿ ಬ್ಯಾರಿ ಮಲೆಯಾಳ–ಕೊಡವ–ಹಾಗೂ ಇತರ ಪ್ರಾದೇಶಿಕ ಭಾಷೆಗಳ ಬರೆಯಕೆ ಸರಳ ಕನ್ನಡ ಸಂಕ್ಷಿಪ್ತ ಲಿಪಿ ಹೆಚ್ಚು ಉಪಯುಕ್ತ.

ಕನ್ನಡ ವರ್ಣಮಾಲೆಲಿ ಸ್ವರಗ 14, ಯೋಗವಾಹಗ 2, ವರ್ಗೀಯ ವ್ಯಂಜನಗ 25, ಅವರ್ಗೀಯ ವ್ಯಂಜನಗ 9, ಹಳೆಗನ್ನಡದಲ್ಲಿ ಬಳಕೆಲ್ಲಿದ್ದ ರಳ (ಱ) ಕುಳ (ೞ) ಗ 2, ಹಿಂಗೆ ಒಟ್ಟ್ 52 ಅಕ್ಷರಗ. ಅಕ್ಷರ ಲಿಪಿಗಕ್ಕೆ ಅವುಗಳ ರೂಪ ಕೆಡ್‌ಸದೆ ಹಚ್ಚ್‌ವ ಸಂಕೇತಂದ ಅವುಗಳ 26ಕ್ಕೆ ಸೀಮಿತಗೊಳಿಸಕ್. ಇಲ್ಲಿ ಪ್ರಾಯೋಗಿಕ ಆಗಿ ದೀರ್ಘ(|) ಲಿಪಿ ಪಲ್ಲಟ(<)ಕೆ ಕಂಪ್ಯೂಟರ್‌ನ ಈ ಸಂಕೇತಗಳ ಬಳಸಿಕೊಂಡದೆ.

ಹ್ರಸ್ವ ಸ್ವರ ವ್ಯಂಜನಗಳ (|) ಸಂಕೇತಂದ ದೀರ್ಘಗೊಳಿಸುದರಿಂದ ದೀರ್ಘ ಸ್ವರಾಕ್ಷರಗಳ್ ಆದ ಆ ಈ ಊ ಏ ಓ ಲಿಪಿಗಳ ಗುರುತಿಸಕ್. ಐ ಔ ಗಳ ಅಯ್ ಅವ್ ರೀತಿ ಬರೆವುದರಿಂದ ಅವುಗಳ ಪ್ರತ್ಯೇಕ ಗುರುತಿಸಕ್. ಕನ್ನಡಲಿ ಋ ಕಾರಕ್ಕೆ ರ್– ವಿಸರ್ಗಕೆ ಹ್ ಕಾರ ಸಾಕ್. ವರ್ಗೀಯವ್ಯಂಜನಗಳಲಿ ಅಲ್ಪಪ್ರಾಣಗಕ್ಕೆ (<) ಸಂಕೇತಗಳ ಹಚ್ಚಿ ಮಹಾಪ್ರಾಣಾಕ್ಷರ ಖ ಛ ಠ ಥ ಫ ಘ ಝ ಢ ಧ ಭ ಗಳ ಅಲ್ಲದೆ ಣ ಕೂಡಾ (ನ<) ಗುರುತಿಸಕ್. ಅವರ್ಗೀಯ ವ್ಯಂಜನಗಳಲಿ ಷ ಮತ್ತ್ ಶ ಗಳ ಇದೇ ಸಂಕೇತಗಳ ಷ(ಸ>) ಶ(ಸ<) ಮತ್ತ್ ಳ ಲಿಪಿನ ಲ ಕ್ಕೆ ಹಚ್ಚ್‌ವ ಸಂಕೇತಂದ (ಲ<) ಗುರುತಿಸಕ್. ರಳಕುಳಗಳ ಗುರುತಿಸಿಕೆ ಇದೇ ಸಂಕೇತಗಳ ರಳ(ರ<) ಕುಳ(ಲ>) ಹಚ್ಚಕ್. ಎಲ್ಲಾ ಲಿಪಿ ಬದಲ್ ಮಾಡಿಕೆ ಹಚ್ಚ್‌ವ < ಸಂಕೇತಗಳ ಮೊನೆ ಲಿಪಿಗಳಿಗೆ ಅಭಿಮುಖವಾಗಿದ್ದ್ ಷ ಮತ್ತ್ ಹಳೆಗನ್ನಡ ಕುಳಕ್ಕೆ ಹಚ್ಚ್‌ವ ಈ ಎರಡ್ ಸಂಕೇತಗಳ ಮೊನೆ ಲಿಪಿಗಳಿಗೆ ವಿಮುಖವಾಗಿರುವುದರ ಗಮನಿಸೋಕು. ಶೇಷ (ಸೆ|<ಸ>) ಬಾಳ್ (ಬ|ಲ್>)

**ಸರಳ ಕನ್ನಡಲಿ ಇದೀಗ ಬಳಕೆಗೆ ಬೇಕಾದ ಸಂಕ್ಷಿಪ್ತಗೊಂಡ ಅಕ್ಷರ ಲಿಪಿಗ**

ಸ್ವರಗ–ಅ ಇ ಉ ಎ ಒ **–5,** ಅನುಸ್ವಾರ–ಂ**–1,**

ವರ್ಗೀಯ ವ್ಯಂಜನಗ – ಕ ಚ ಟ ತ ಪ – ಗ ಜ ಡ ದ ಬ – ಙ ಞ ನ ಮ **– 14,**

ಅವರ್ಗೀಯ ವ್ಯಂಜನಗ – ಯ ರ ಲ ವ ಸ ಹ – **6** ಈ 26 ಲಿಪಿಗಕ್ಕೆ ಬೇಕಾರೆ ಸಂಕೇತಗಳ ಹಚ್ಚಿ 52 ಅಕ್ಷರಗಳಾಗಿ ಬಳ್‌ಸಿಕೊಳ್ಳಕ್. ಸರಳ ಕನ್ನಡ ಸಂಕ್ಷಿಪ್ತ ಲಿಪಿಲಿ ಆರಂಭದ ಓದು ಬರೆಹಗ ತುಸು ತಡವರಿಸಿದರೂ ಅಭ್ಯಾಸ ಬಲಂದ

ಮುಂದೆಗೆ ರೂಢಿಯಾದೆ. ಅಲ್ಲದೆ ಹಸ್ತಾಕ್ಷರ ಮತ್ತ್ ಕಂಪ್ಯೂಟರ್ ಲಿಪಿ ಸಂಯೋಜನೆಲಿ ಇದ್ ಸಮಾನ ಶ್ರಮ ವೇಗ ಪಡೆದುಕೊಂಡದೆ. ಸರಳ ಕನ್ನಡಕೆ ಸಂಕ್ಷಿಪ್ತ ಲಿಪಿ ಇಂದ್ ಕನ್ನಡಲಿ ಬರ್‌ದ್ ಬಾವ ತುಳು ಹಾಗೂ ನೆರೆಯ ಪ್ರಾದೇಶಿಕ ಭಾಷೆಗಳ ಬಳಕೆಗೆ ಮಾತ್ರ ಅಲ್ಲ. ಕನ್ನಡಕೂ ಮುಖ್ಯ ಅಂತ ತಿಳುವಳಿಕೆ ಇರಲಿ. ಪ್ರತಿ ಭಾಷೆಗೂ ಅದರ್‌ದೇ ಆದ ಲಿಪಿ ಇರಲಿ. ಕನ್ನಡಲಿ ಬಳಕೆ ಇರ್‌ವ ಗ್ರಾಂಥಿಕ ಲಿಪಿ ಉಳಿಯಲಿ. ಶಾಸ್ತ್ರೀಯ ಭಾಷಾ ವಿದ್ವಾಂಸರ ಹೆಚ್ಚಿನ ಅಧ್ಯಯನ ಸಂಶೋಧನೆಗಕ್ಕೆ ಇದ್ ಮುಡಿಪಾಗಿರಲಿ. ಹೊಸದಾಗಿ ಕನ್ನಡ ಕಲಿವವಕೆ, ಮುಖ್ಯವಾಗಿ ಮಕ್ಕಳ್‌ಗೆ ಸುಲಿದ ಬಾಳೆಯಹಣ್ಣಿನ ಹಾಂಗೆ ಕನ್ನಡ ಸುಲಭವಾಗಲಿ. ಪ್ರಾಥಮಿಕಂದ ಹಿಡ್‌ದ್ ಹಿರಿಯ ಪ್ರೌಢ ತರಗತಿಗಳಲಿ ಹಂತಹಂತ ಆಗಿ ಗ್ರಾಂಥಿಕ ಕನ್ನಡದ ಲಿಪಿಗಳ ಶಿಕ್ಷಣಲಿ ಅಳವಡಿಸಿಕೊಳಲಿ. ಇದ್ ಸಾಧ್ಯಆಕೆ ಕಂಪ್ಯೂಟರ್‌ಲಿ ಇದರ ಅಳವಡಿಸುವ ತಂತ್ರಜ್ಞರ್‌ಂದ ಲಿಪಿ ಸಂಯೋಜಕರ್‌ಂದ ಜನಸಾಮಾನ್ಯರ್‌ಗೆ ಇದರ ಮುಟ್ಟಿಸುವ ಪತ್ರಿಕೆಗಳ್‌ಂದ ಹೊಸತಿಗೆ ಹೊಂದಿಕೊಳ್‌ವ ಓದುಗ ಬರೆಹಗಾರರ್‌ಂದ ಇದ್ ಸಾಧ್ಯ ಆಗಲಿ.



## ಕಾದ್‌ದ್ ಕುದ್ದಂವ

**ಮನೋಜ್ ಕುಡೇಕಲ್ಲ್**

ನನ್ನರಸಿ ಬಾದುಯಾ ಅಗ್ಗಾಲ ರಜೆಲಿ
ಊರಿಡಿ ಒಟ್ಟೀಗೆ ಸುತ್ತೀಕೆ ॥ಪ॥

ಕಾದ್‌ದ್ ಕುದ್ದುಟ್ ಆಸೇಲಿ ಮನ್ಸ
ಹಗ್‌ಲ್‌ಲಿ ಕುದ್ದ ಗುಮ್ಮನ ಹಾಂಗೆ
ನೋಡದೆ ಅವಳ ವರ್ಷನೆ ಕಳ್ತ್
ಇಂದೊರಗೆ ಹೇಂಗೋ ಭಂಗಾಲಿ ॥೧॥

ಜಿಬ್ಲಿ ಆಟಕೆ ಹಾಕಿದ ಕೋಣೆಗ
ಆಳ್ಸಿತ್ತೆ ಇನ್ನೂ ಜಾಲ್‌ಲಿ
ಹೆರ್ಕಿಟ್ಟ ಹಂಚಿ, ತುಂಡ್‌ನ ನೆನ್ಸಿರೆ
ಕಾಲದ್ ತನ್ನಷ್ಟಕ್ಕೆ ತಾಂಟೂದು ॥೨॥

ಈ ಮಳ್ಗಾಲ ಬಂದರೆ ಮಾಯ್ಸಣ್ಣ್ ಹೆರ್ಕ್ಯವ
ತೋಟದ ಆಚೇನ ಮರದಡಿಲಿ
ಜೋಂಪುಳ ಹಣ್ಣ್‌ನ ಹುಳಿಯುಟ್ಟ್ ಹಲ್ಲ್‌ಲಿ
ಜಗಳಾಡಿ ತಿಂದ ಗೌಜಿಲಿ ॥೩॥

ಮನೆ ಹಿಂದೆ ಗೋಡೆಗೆ ಸೇರ್‌ಸಿದ್ ಕಟ್ಟೋ
ಉಪ್ಪಿಕೆ ದಂಡ್‌ಲಿ ಚಪ್ಪರ
ಗೋರ್ಗ್ಗೋರು ಹಾಳೇಲಿ ಕುದ್ದುರ್ಸಿ ನಿನ್ನ
ಎಳಿತಿದ್ದೆ ಊರ್‌ನ ದಾರೀಲಿ ॥೪॥

ಕಣ್ಣ್‌ನ ದೃಷ್ಟಿ ಬಸ್ಸ್‌ನ ಕಾದೂಟು
ಆಚೀಚೆ ನೊಡದೆ ಬೊಳ್ಪುಂದ
ಮನ್ಸ್‌ಗ ಎರ್ಡ್ ಹಕ್ಕಲೆ ಆವೋ
ಬರಿ ಇನ್ನ್ ಹತ್ತ್ ನಿಮಿಷಲಿ ॥೫॥



ಅರೆಭಾಷೆ-ಕನ್ನಡ-ಇಂಗ್ಲಿಷ್
ಶಬ್ದಕೋಶ
ಅರೆಭಾಷೆ ಗಾದೆಗ ಮತ್ತು ನುಡಿಗಟ್ಟ್‌ಗ
ಸಂಪಾದಕರ್
ಕೆ.ಆರ್.ಗಂಗಾಧರ

# “ಅರೆಭಾಷೆ–ಕನ್ನಡ–ಇಂಗ್ಲೀಷ್ ಶಬ್ದಕೋಶ”: ಒಂದು ಅನಿಸಿಕೆ

**ಯು.ಸು.ಗೌ ಗುತ್ತಿಗಾರು**

ಯಾವುದೇ ಬಾಸೆ ಅದರ ವಿಶೇಷತೆನ ತೋರ್ಸಿಕೆ ಬರೇ ಜನ ಮಾತಾಡ್ರೆ ಸಾಲದ್, ಅದ್ರ ಮೇಲೆ ತುಂಬ ಕೆಲ್ಸ ಆಕು. ಆ ಕೆಲ್ಸ ಏನ್‌ಂತೇಳ್ರೆ ಆ ಬಾಸೆನ ಬೇರೆ ಬೇರೆ ರೀತಿಲಿ ಬಳ್ಕೆ ಮಾಡಕಾದ ಸಾಧ್ಯತೆಗಳ ಕಾಣಕು. ಪ್ರಪಂಚಲಿ ಬಾರೀ ಹೆಸ್ರು ಹೋದ ಬಾಸೆಗೆಲ್ಲ ಹಾಂಗೆ. ಒಂದು ಕಾಲಲಿ ಇಂಗ್ಲೆಂಡ್‌ಲಿ ಮಾತ್ರ ಇದ್ದ ಇಂಗ್ಲೀಷ್ ಇಂದ್ ಅದರ ಜಾಗತಿಕ ಸ್ಥಾನಮಾನ ನೋಡ್ರೆ ಅಚ್ಚರಿ ಆದೆ.

ನೂರಾರ್ ವರ್ಷಂಗಳ್ದ ಒಂದು ಜನಾಂಗ ಮಾತ್ರ ಮಾತಾಡ್ತ ಬಂದ ಅರೆಬಾಸೆ ಇಂದ್ ಜನಪ್ರಿಯ ಬಾಸೆ ಆಗ್ತಾ ಇರುದು ಖುಶಿ ಕೊಡುವ ಸಂಗ್ತಿ. ಅಕಾಡೆಮಿ ಆದ್ ಮೇಲಂತೂ ಈ ಬಾಸೆಲಿ ಇದ್ದ ಕೀಳರಿಮೆ ಕಡಿಮೆ ಆಗ್ತಾ ಉಟ್ಟು. ಈ ಬಾಸೆನ ಇನ್ನೂ ಗಟ್ಟಿ ಮಾಡುವ ಒಂದು ಪ್ರಯತ್ನದ ಹಾಂಗೆ ಅರಂತೋಡ್‌ನ ಕೆ.ಆರ್ ಗಂಗಾಧರರ 'ಅರೆಬಾಸೆ–ಕನ್ನಡ ಇಂಗ್ಲೀಷ್ ಶಬ್ದಕೋಶ' ಕಂಡದೆ. ಬಾಸೆನ ಸಾಮರ್ಥಿಗೆ ತೋರ್ಸುವ ಒಂದು ಮಾನದಂಡಂತೇಳ್ರೆ ನಿಘಂಟು ರಚನೆ. ಅರೆಬಾಸೆಲಿ ಹಿಂದೆ ನಾಟಕ, ಯಕ್ಷಗಾನ, ಪದ್ಯ ಕಥೆ ಹೀಂಗೆ ಏನೇನೊ ಕೆಲ್ಸ ಮಾಡಿರ್ವೊ. ಆದರೆ, ನಿಘಂಟು ಮಾಡುವ ಸಾಸಕ್ಕೆ ಯಾರೂ ಹೋತಿಲ್ಲೆ. ಕಾರಣ, ಅದ್ ಹೇಳಿದಷ್ಟ್ ಸುಲಭ ಅಲ್ಲ. ಅಥವಾ ಸಾಹಿತ್ಯ ರಚನೆನಾಂಗೂ ಅಲ್ಲವೇ ಅಲ್ಲ. ಅದ್ ವಿಶ್ವವಿದ್ಯಾಲಯದಂತ ಸಂಸ್ಥೆನೋ

ತಜ್ಞರ ಸಮಿತಿಯೋ ವರ್ಷಾನುಗಟ್ಟಲೆ ಅಭ್ಯಾಸ ಮಾಡಿ, ವಿಚಾರ ಮಾಡಿ ವೈಜ್ಞಾನಿಕ ರೀತಿಲಿ ಮಾಡಕಾದ ಭಾರೀ ಕೆಲ್ಸ. ಆದರೆ ಇಲ್ಲಿ ಗಂಗಾಧರರಂತ 'ಏಕವ್ಯಕ್ತಿ' ಈ ಕೆಲ್ಸಕ್ಕೆ ಇಳ್ದದ್ದೇ ಸಂತೋಷ. ಕಿಟ್ಬಲ್, ಕಾರಂತರಂಥವು ಮಾಡ್ದ ಕೆಲ್ಸ ಗಂಗಾಧರರವು ಅರೆಬಾಸೆಲಿ ಮಾಡಿ 'ಅರೆಬಾಸೆ ಕಿಟ್ಬಲ್' ಎನಿಸಿ ಕಂಡದ್ದ್ ಚರಿತ್ರೆಲಿ ದಾಖಿಲಾಗುವಂತಹ ವಿಚಾರ.

ಇವರ ಶಬ್ದಕೋಶ ಒಂದು ಪರಿಪೂರ್ಣ ಆಕರ ಗ್ರಂಥ ಅಂತ ಹೇಳಿಕೆ ಆದುಲ್ಲೆ. ಆದರೆ ಇದರ ಗುಣದೋಷಗಳ ಬಗ್ಗೆ ಕಟ್ಟುನಿಟ್ಟಾದ ವಿಮರ್ಶೆ ಈ ಹಂತಲಿ ಸರೀಂತ ಅನ್ನಿಸುದುಲ್ಲೆ. ಏಕೆಂತೇಳ್ರೆ ಇವರ ಕೆಲ್ಸಕೆ ಅರೆಬಾಸೆಗೆ ಸಂಬಂಧಿಸಿದ ಹೆಚ್ಚಿಗೆ ವಿಶೇಷ ಆಕರಗಳೇ ಇಲ್ಲೆ. ಎಲ್ಲವೂ ಒಬ್ಬನ ದುಡಿಮೆ. ಅದೂ ಅಲ್ಲದೆ ಅರೆಬಾಷೆ ಮಾತಾಡುವವರ ಸಂಖ್ಯೆನೂ ದಿನೇ ದಿನೇ ಕಡಿಮೆ ಆಗ್ತಾ ಉಟ್ಟು. ಅರೆಬಾಸೆ ಇಂದ್ ತುಳು, ಇಂಗ್ಲೀಷ್, ಕನ್ನಡ ಶಬ್ದಗಳ ಬೆರ್ಕೆ ಆವುಟು. ಹಾಂಗೆ ಅಚ್ಚ ಅರೆಬಾಸೆ ಶಬ್ದಗಳೇ ಮಾಯಾ ಆಗ್ತಾ ಇರುವ ಈ ಕಾಲಲಿ ನಿಘಂಟು ನಿರ್ಮಾಣ ಕಷ್ಟ ಆದ್ರೂ ಅನಿವಾರ್ಯಂತೇಳಕ್.

ಅರೆಬಾಸೆಲಿ ಪ್ರಾದೇಶಿಕ ವ್ಯತ್ಯಾಸ ತುಂಬಾ ಉಟ್ಟು. ಉದಾಹರಣೆಗೆ ಗುತ್ತಿಗಾರು-ಕೊಲ್ಲಮೊಗ್ರ, ಸುಬ್ರಹ್ಮಣ್ಯ ಭಾಗ; ಸುಳ್ಯ-ಅರಂತೋಡು, ಪೆರ್ಜ ಭಾಗ; ಕೊಡಗು ಜಿಲ್ಲೆ ಭಾಗ; ಈ ಭಾಗಗಳ್ಳಿ ಮಾತಾಡುವ ಶೈಲಿ, ಶಬ್ದ ಪ್ರಯೋಗಗಳಲ್ಲಿ ವ್ಯತ್ಯಾಸ ಉಟ್ಟು. ಇಂಥದ್ದೆಲ್ಲ ಸಾಧ್ಯವಾದಷ್ಟು ಹುಡ್ಕಿ ಅವ್ಕೆ ಅರ್ಥಕೊಡುವ ಪ್ರಯತ್ನ ಶಬ್ದಕೋಶಲಿ ಮಾಡ್ಯೊಳೊ.

ಉದಾಹರಣೆಗಾಗಿ ಈ ವ್ಯತ್ಯಾಸನ ಹೀಂಗೆ ಗುರುತಿಸೊಕು.

| ಗುತ್ತಿಗಾರು- ಕೊಲ್ಲಮೊಗ್ರು.. | ಅರಂತೋಡು -ಪೆರ್ಜ.. ಕೊಡಗು | |
|---|---|---|
| · ಒಸಿ | ಹಂಞ | |
| · ಇಸಿತ್ | ಇಟ್ಟತ್, ಮಡ್ಗಿತ್ | |
| · ಗುಬ್ಬಿ | (ಬಟನ್) | ಕೊಂಡಿ |

ಇನ್ನ್ ಕನ್ನಡದ ಪ್ರಭಾವಲಿ ಬೊಳ್ಪಿಗೆ – ಬೆಳಿಗ್ಗೆ; ಬೊಳ್ಪಿಗೆನ ತಿನ್ಸ್-ನಾಷ್ಟಾ

ಇಂಗ್ಲೀಷ್‌ನ ಪ್ರಭಾವಲಿ ಚಾಯ-ಟೀ

ಎಲ್ಲಾ ಸಂಬಂಧಗ ಅಂಕಲ್ ಆಂಟಿ; ಆಗಿ, ಒಟ್ಟ್‌ಲಿ ಅರೆಬಾಸೆ ಒಂದು ಸಂಕ್ರಮಣ ಕಾಲಲಿ ಬಂದ್ ನಿಂತುಟು.

ಪುಸ್ತಕದ ಆರಂಬಲಿ ಕೃತಿಕಾರರೇ ಹೇಳ್ದ ಹಾಂಗೆ "ಇದ್ ನನ್ನ ವಿನಮ್ರ ಪ್ರಯತ್ನ. ಇದರ‍್ಲಿ ಎಲ್ಲವೂ ಸರಿ, ಪಾಂಡಿತ್ಯ ಪೂರ್ಣವಾಗಿ ಉಟ್ಟುಂತ ಸಮರ್ಥಿಸಿಕಂಬ ಪೊಡುಂಬ ನಾ ಅಲ್ಲ. ಇದರ‍್ಲಿ ತಪ್ಪ್‌ಗ, ದೋಷಗ, ಖಂಡಿತಾ ಸುಳಿದಿದು" ಅಂತ ತುಂಬಾ ವಿನಯಲಿ ಒಪ್ಪಿಕೊಂಡೊಳೊ. ಅದ್ ಅವರ ಸಜ್ಜನಿಕೆಯೂ ಹೌದು. ಆದ ಕಾರಣ ಗುಣ ದೋಷಗಳ ಬಗ್ಗೆ ಹೇಳುದೇ ತಪ್ಪು ಅಂತಲ್ಲ; ತುಂಬ ತೋರಮಟ್ಟಲಿ ಹೇಳುದಾದರೆ ಒಂದೆರಡ್ ಹೇಳಕ್.

- ಅಂದಾಜು 4000 ಶಬ್ದಗ, 500 ಗಾದೆಗ, 300 ನುಡಿಗಟ್ಟುಗಳ ಇದರ‍್ಲಿ

ಸೇರಿಕೆ ಆವುಟು. ಇನ್ನೂ ಅವಕಾಶ ಉಟ್ಟು. ಅರೆ ಬಾಸೆ ಅಧ್ಯಯನಕೆ ಮುಂದೆ ಈ ನಿಘಂಟು ಖಂಡಿತಾ ಒಂದು ಮೈಲ್ ಕಲ್ಲ್‌ಂತ ಧಾರಾಳ ಹೇಳಕ್.

· ಕೆಲವು ಅಪರೂಪ ಶಬ್ದಗ– ಅಥವಾ ಮರ್ತೇ ಹೋದ ಶಬ್ದಗ ಈ ಕೋಶಲ್ಲಿ ಕಾಣಕ್. ಉದಾಹರಣೆಗಾಗಿ 1. ಅಂಡ್‌ಸ್ (ಅಂಡ್ರೆಸ್) 2. ಅಚ್‌ಕಟ್

ಹಜಿರ್ ಹೊಸ ಪ್ರಯೋಗವೂ ಉಟ್ಟು. ಆದ್ರೆ ಕೋಶಲಿ ಅಸಂಖ್ಯಾತವಾಗಿರುವ ಪ್ರಾಕ್‌ನ ಉಪ್ಪಣ, ಕಿಂಟ್ರ್, ಕೊಮ್ಮೆ, ತಂಜಣೆ, ಗಿಡ್ಪು, ಬೂಚು.. ಮುಂತಾದ ಪದಗಳೇ ಕಾಂಬೋದಿಲ್ಲೆ.

· ಸಣ್ಣಮಟ್ಟ ವ್ಯಾಕರಣ ವಿಶೇಷಗಳಲ್ಲಿ, ಅರ್ಥ ಕೊಡುವಲ್ಲಿ ಕೆಲವು ವಿಸಂಗತಿಗ ಉಟ್ಟು.

· ಅರೆಬಾಸೆಲಿ ಗಾದೆಗ ನುಡಿಗಟ್ಟುಗ ಸಾಕಷ್ಟ್ ಉಟ್ಟು. ನಮ್ಮ ಹಿರಿಯವು ಅದೆಲ್ಲ ನಿತ್ಯ ಮಾತ್‌ಲಿ ಬಳಸ್‌ತಿದ್ದೊ. ಅವರ ಮಾತ್ ಕೇಳಿಕೆ ಕುಶಿ ಆಕ್ತ್ತತ್ತ್. ನಿಘಂಟ್‌ಲಿ ಇವುಗಳ ಕಳೆ ಹಾಕುವ ಪ್ರಯತ್ನ ಮಾಡ್ದ್ ಒಳ್ಳೆ ಅಂಶ. ಈ ಗಾದೆಗಳ ನುಡಿಕಟ್ಟುಗ ಕೆಲವು ಸೀದಾ ಕನ್ನಡಂದ ತಂದ ಹಾಂಗೆ ಉಟ್ಟು–ಆರೋಗ್ಯವೇ ಭಾಗ್ಯ, ಎತ್ತಿದ ಕೈ, ಹನುಮಂತನ ಬಾಲ.. ಇತ್ಯಾದಿಗ ಉದಾಹರಿಸೊಕ್. ಆದ್ರೂ ಬಾಸೆ ಬೆಳಿಕೆ ಇದೆಲ್ಲ ಕಡತಂದರೂ ಬೇಕೇ ಬೇಕು.

· ಈ ಕೋಶಲಿ ಅರ್ಥ ಕೊಡ್ ಕಾಕನ ಇಂಗ್ಲೀಷ್ ವಿವರಣೆ ಎಷ್ಟರ ಮಟ್ಟಿಗೆ ಅಗತ್ಯ. ಆಲೋಚನೆ ಮಾಡೊಕು. ಅಗತ್ಯ ಇದ್ದಷ್ಟೇ ಕೊಡ್ತಿದ್ದರೆ ಸಾಕಿತ್ತೋ ಏನೋ ಅನ್ನಿಸಿದೆ.

ಸಂಪಾದಕರ್ ತಮ್ಮ ಕೃತಿನ ಮುಕ್ತವಾಗಿ ಇಸಿದ್ದೇ ಸಂತೋಷ. ಇದ್ ಮುಂದೆ ಮುದ್ರಣ ಆಗುವ ಸಂದರ್ಭಲಿ ಕನ್ನಡ ಸಾಹಿತ್ಯ ಪರಿಷತ್, (1975) ನಿಘಂಟ್ ನಿರ್ಮಿಸಿಕಾಕನ ತಜ್ಞರ ಸಮಿತಿಯ ರಚನೆ ಮಾಡಿದ್ದ ಹಾಂಗೆ–ಸಮಿತಿ ರಚಿಸಿ ಸಲಹೆ ಸೂಚನೆ ಪಡ್ದ್ ಪರಿಣಾಮಕಾರಿಯಾಗಿ ಸಂಪಾದಿಸೊಕು. ಏನಿದ್ರೂ ಗಂಗಾಧರರಿಗೆ ಸಾಥ್ ನೀಡ್ದ ಪ್ರಕಾಶಕರಾದ ಗೌಡ ಸೋಶಿಯೋ ಎಜ್ಯುಕೇಶನ್ ಟ್ರಸ್ಟ್, ಸುಳ್ಯ ಇವೂ ಕೂಡಾ ಅಭಿನಂದನೆಗೆ ಅರ್ಹರ್. ಈ ಬಗ್ಗೆ ಅರೆಬಾಸೆ ಅಕಾಡೆಮಿಯೂ ಮುಂದಿನ ಆವೃತ್ತಿಗೆ ಎಲ್ಲಾ ರೀತಿನ ಜ್ಞಾನ ಮತ್ತು ಧನದ ಆಶ್ರಯ ನೀಡುವಂತಾಗಲಿ, ಬಾಸೆ ಬೆಳೆಲಿ, ಬೆಳಗಲಿ.



# ಕಾಯಕ ಯೋಗಿ

ಸಂಗೀತ ರವಿರಾಜ್ ಚೆಂಬು

ಹುಗ್ಗಿ ಉಂಡ ಸುಖ
ಅದರೊಟ್ಟಿಗೆ ಉಣ್ಸಿದ ಸುಖ
ಈ ಎರ್ಡ್ ಸುಖ ಒಟ್ಟಿಗೆ ಸಿಕ್ಕುದು
ಕೆಸರ್ ಮೆತ್ತಿ ಬೆಳ್ಸಿದ ಜೀವಕ್ಕೆ ಮಾತ್ರ ದಕ್ಕುದು
        ಬೊಳ್ಪಿಗೆದ್ದ್ ಗದ್ದೆ, ತೋಟಾಂತ ದುಡ್ದ ಎಲುಬುಗ
        ಮಕ್ಕಳ ಬೆಳ್ಸಿದಂಗೆ ಮಣ್ಣ್‌ಲಿ ಚಿನ್ನ ಬೆಳ್ದವೆ
        ಕಾಣದಂಗೆ ಕೆಲ್ಸ ಮಾಡಿ
        ಕಾಣುವಂಗೆ ಏನುಸ ಮಾಡದೆ
        ಇಡೀ ಲೋಕದ ಕುಮ್ಮ ತುಂಬ್ಸುವೆ
ಆಗಾಗ ತಲೆ ಎತ್ತಿ ಆಕಾಶ ನೋಡಿಕಂಡ್
ಜಾಲ್‌ಲಿ ಕುದ್ದವನ ಕಣ್ಣ್‌ಲಿ ಕರ್ಕುಟ್ಟಿ ಕತ್ತಲೆ
ಸುತ್ತ ತಿಂಗಳ್ ಬೊಳ್ಪು ಇದ್ದರುಸ
ಕಣ್ಣಿಗೆ ಚುಚ್ಚಿದೆ ಸಾಲದ ಶೂಲೆ
        ತಲೆ ಮೇಲೆ ಕೈ ಹೊತ್ತ ಮೌನಿಗ
        ಮುನಿಗಳಂಗೆ ಇರುವವು
        ಮಕ್ಕ ಎಲ್ಲಾ ಓದಿರುಸ
        ಕೃಷಿಲಿ ತಂತ್ರಜ್ಞಾನ ಬಂದರುಸ
        ನಾವು ನಾವಾಗಿಯೆ ಉಳಿಯುವಂತವು
ಹಂಞ ದುಡ್ಡ್‌ನ ಸಂಪಾದನೆಲಿ
ದಿನ ಇಡೀ ಮೈ ಬಗ್ಗ್‌ಸಿ ಬೆವರ್ ಹರ್ಸಿದರ್ಲಿ
ದುಡ್ದ್ ತಿಂದ ತೃಪ್ತಿ ಕಂಡದೆ...
ದುಡ್ಡ್‌ಂದ ಬದ್ಕ್ ದೊಡ್ಡದ್‌ಂತ
ತಿಳ್ಕಂಡವು ಮಾತ್ರ ನಿಜದ ಅರ್ಥಲಿ ದೊಡ್ಡವು.

❖❖❖





# ಕೊಡಗ್‌ನ ಸಂಸ್ಕೃತಿ

ಕಟ್ರತನ ಲಲಿತಾ ಅಯ್ಯಣ್ಣ

ಮೂರ್ತಿ ಚಿಕ್ಕದಾದರ್ ಕೀರ್ತಿ ದೊಡ್ಡದ್‌ತ್ತೇಳುವ ಗಾದೆ ಮಾತ್ ಕೊಡಗ್‌ನ ಪಾಲಿಗೆ ಅಕ್ಷರಶಃ ಸತ್ಯ. ಕರ್ನಾಟಕದ ಜಿಲ್ಲೆಗಳ ಪೈಕಿ ಕೊಡಗ್ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತೆ ಧಾರ್ಮಿಕ ಕ್ಷೇತ್ರಗಳಲ್ಲಿ ತನ್ನದೇ ಆದ ವೈಶಿಷ್ಟ್ಯನ ಪಡ್ದುಟು, ಕರ್ನಾಟಕ ಭಾರತಾಂಬೆಯ ಮಗಳಾದರೆ, ಕೊಡಗ್ ಕನ್ನಡಾಂಬೆಯ ಮಗಳ್‌ತ ಹೇಳಕ್.

ದಕ್ಷಿಣ ಗಂಗೆ ಕಾವೇರಿ: ಕೊಡಗ್ ತೇಳ್ದ ಕ್ಷಣಲಿ ನಮ್ಮ ಮನ್ಸ್‌ಲಿ ಸಾಕ್ಷಾತ್‌ಕಾರಗೊಳ್ಳುದ್, ಮಾತೆ ಕಾವೇರಿನ ಭವ್ಯ ಗಂಭೀರ ಹರಿವು, ಮೈಮೆರ್‌ಸುವಂತ ಭಕ್ತಿ ಭಾವದ ಹರಿವು

ಪಾವನೆಯರ ಕೃಷ್ಣೆ
ಭೀಮೆಯರ ತಾಯ್ನಾಡು
ಕಾವೇರಿ ಗೋದೆಯರು
ಮೈದೊಳೆಯುವ ನವಿನಾಡು

ಎಂದ್ ಕವಿ ಕನ್ನಡ ನಾಡ್‌ನ ವರ್ಣಿಸಿಟ್ಟು, ದಕ್ಷಿಣ ಗಂಗೆತ ಹೆಸರ್‌ಪಡ್ದ ಕೊಡಗ್‌ನ ಮಹಾನದಿ ಕಾವೇರಿ ಅಲ್ಲದೆ ಅದರೊಟ್ಟಿಗೆ ಅಲ್ಲಲಿ ಸೇರಿಕಂಡ್ ಹಕ್ಕಲೆ ಲಕ್ಷ್ಮಣ ತೀರ್ಥ ಮತ್ತೆ ಇನ್ನೂ ಹೆಚ್ಚ್ ಸಣ್ಣ ಹೊಳೆಗ, ಕಿರ್‌ನದಿಗ ಪ್ರಕೃತಿ ಸೊಬಗ್‌ನ ಪೊರ್ಲ್‌ನ ವಸ್ತ್ ಮಾತ್ರ ಅಲ್ಲ, ಇಲ್ಲಿನ ಸಿರಿ ಸಂಪತ್‌ನ ಜೀವಾಳ ಹೌದ್ ,ಅವ್ ಬೆಳೆ ಬೆಳ್ಸಿ ಬೆಳಕ್ ನೀಡಿ ಬಾಳ್‌ನ ಪೋಷಿಸ್‌ತಿರ್‍ವ ಕರುಣಾಮಯಿಗ, ಅಷ್ಟೇ ಅಲ್ಲ ಅವು ನಮ್ಮ ನಾಡ್‌ನ ಪಾವನಗೊಳಿಸೊಳೊ. ಕೊಡಗ್‌ನ ಜನತೆದ್ ಪ್ರತಿಯೋಂದರ‍್ಲು ಪಾವಿತ್ರ್ಯದ ಕಾಣ್‌ವ ಹಿರಿಯರ ಮನ್ಸ್ ಹಂಗೆನೆ ನಮ್ಮ ಜನಪದ ಸಾಹಿತ್ಯಲಿ ಸ ಕಾವೇರಿನ ಪಾತ್ರ ದೊಡ್ಡದಾಗಿಟ್ಟು. ಸುತ್ತ ಹಸಿರ್‌ಕಾಡ್‌ನ ನಡ್‌ವೆ ಬ್ರಹ್ಮಗಿರಿಲಿ ಒಂದು ಸಣ್ಣ ಜಾಗೆಲಿ ಮೌಲ್ಯಕ್ಕೆ ಚಿಮ್ಮುವ ಸೆಲೆನ ನೋಡಿಕೆ ಮುಂದೆ ಇದ್ ಬೃಹದಾಕಾರವಾಗಿ

ಹರ್ದ್ ಲಕ್ಷೋಪಲಕ್ಷ ಜನಕ್ಕೆ ಜೀನಾಧಾರಕೆ ಹೆಂಗೆ ಸಾದ್ಯತೇಳ್ದು ಯಾರಿಗಾದ್ರೂ ಅಚ್ಚರಿ ಮೂಡ್‌ಸ್ಸಿದೆ.

ದಂತಕತೆ : ಕಾವೇರಿನ ಬಗ್ಗೆ ಒಂದು ಒಳ್ಳ ದಂತ ಕತೆ ಇರ್ದು ಎಲ್ಲವ್ನು ತಿಳ್ದ ವಿಚಾರ, ಬ್ರಹ್ಮನ ಮಾನಸ ಕೂಸಾದ ಲೋಪಾ ಮುದ್ರೆನ ಸಂತಾನ ಇಲ್ಲದೆ ಇದ್ದ ಕವೇರ ಮುನಿ ದತ್ತ್ ತಕಂಡದೆ. ಅಂದ್‌ಂದ ಲೋಪಾಮುದ್ರೆ ಕವೇರನ ಮಗಳ್ ಕಾವೇರಿ ಆದೆ. ವಯಸ್ಸಿಗೆ ಬಾಕನ ಕಾವೇರಿಗೆ ಅಗಸ್ತ್ಯ ಮುನಿಯೊಟ್ಟಿಗೆ ಮದ್ವೆ ಆದೆ. ಕೆಲ್ ಸರತ್ತ್‌ಗೆ ಒಪ್ಪಿ ಅಗಸ್ತ್ಯ ಮುನಿನ ಮದ್ವೆ ಆದ್ ಅಗಸ್ತ್ಯ ಮುನಿಂದ ವಚನಭಂಗ ಆಕನ ಹೊಳೆಯಾಗಿ ಹರ್ದದೆತ ಪ್ರತೀತಿ ಉಟ್ಟು ಕಾವೇರಿನ ಪಾತ್ರ ಕೊಡಗ್‌ಗಿಂತ ಹೊರ ಜಿಲ್ಲೆಗಳ್‌ಲಿ ಹೆಚ್ಚ್ ಕಾವೇರಿ ಹರಿವ ಜಾಗೆಂದ ಉದ್ದಕೆ ಅನೇಕ ಪುಣ್ಯ ಕ್ಷೇತ್ರ ಇದ್ದು ಇದರ ತೀರಲಿ ಇರ್ವ ಶ್ರೀ ರಂಗಪಟ್ಟಣ, ಮಹದೇವೂರು ತಲಕಾಡು, ತಂಜಾಪುರ ಹಿಂಗೆ ಸ್ಥಳಗ ಪವಿತ್ರ ಕ್ಷೇತ್ರಗಳಾಗಳೊ. ಚೋಳರ್, ಪಾಂಡ್ಯರ್, ಹೊಯ್ಸಳ ಮತ್ತೆ ಮೈಸೂರು ಅರಸ್‌ಗ ಕಟ್ಟಿದ ರಾಜ್ಯಗ ಕಾವೇರಿ ತೀರಲಿ ಮೆರ್ದ್ದೊಳೊ. ಒಟ್ಟ್‌ಲಿ ನಮ್ಮ ನಾಡ್‌ನ ಜಲಾಶಯಗಳ್‌ಗೆ ಇದ್ ಆಶ್ಚರ್ಯ? ಪುಣ್ಯಕ್ಷೇತ್ರಗಳ್‌ಗೆ ಪಾವನ ವಿದ್ಯುದಾಗರ್‌ಗಳ್‌ಗೆ ಜೀವಾಳ, ಪೈರ್ ಪಚ್ಚೆಗಳ್‌ಗೆ ಜೀವ ಮೃಗ ಪಕ್ಷಿಗಳ್ಗೆ ಪ್ರಾಣ, ಧಾರ್ಮಿಕ ಸಂಸ್ಕೃತಿಗೆ ಆಸ್ರಯ ಆಗಿರುವ ಕಾವೇರಿ ಹೊಳೆ ಇಂದ್ ಪಂಚವಾರ್ಷಿಕ ಯೋಜನೆಗಳ ಬೃಹತ್ ಯೋಜನೆಗಳ್ಗೆ ಆಧಾರವಾಗುಟ್ಟು. ಭಾರತಲಿ ಬೇರೆ ಯಾವ ಹೊಳೆನೊ ಇಷ್ಟೊಂದು ಸಮರ್ಪಕವಾಗಿ ನೀರಾವರಿಗೆ ಬಳ್‌ಸಿಕಂಡದ್ದ್ ಇಲ್ಲೆತ ಹೇಳುವೆ.

**ಕೊಡಗ್‌ನ ಹಬ್ಬಗ**

ಧಾರ್ಮಿಕ ಮನೋಭಾವ ಇರ್ವ ಕೊಡ್‌ಗ್‌ನ ಜನ ಪ್ರತಿಯೊಂದು ಗ್ರಾಮಲೂ ಗ್ರಾಮ ದೇವತೆಗಳ್ನ ಪ್ರತಿಷ್ಠಾಪನೆ ಮಾಡಿಕಂಡ್ ಪೂಜಿಸ್ತಾ ಬಂದೊಳೊ. ಪ್ರತಿವರ್ಷ ನಿಗಧಿತ ಸಮಯಲಿ ನಡೆವ ಗ್ರಾಮ ದೇವತೆ ಉತ್ಸವ ಗ್ರಾಮ ಗ್ರಾಮಗಳ ಜನರ ಒಗ್ಗಟ್ಟಿನ ಪ್ರತೀಕವಾಗುಟ್ಟು. ಈ ಸಂದರ್ಭಲಿ ಎಲ್ಲಾ ಕಡೆಂದ ಜಾತಿ ಮತ ಭೇದ ಇಲ್ಲದೆ ಎಲ್ಲಾ ವರ್ಗದ ಜನ ಸಹಾ ಸೇರಿಕಂಡ್ ತಮ್ಮ ಇಷ್ಟಾರ್ಥ ಸಿದ್ದಿನ ಪಡ್‌ಕಂಬುದು ನಡ್ದ್ ಬಂದ ಕ್ರಮವಾಗುಟ್ಟು.

**ಕೊಡ್‌ಗ್‌ನ ಹಬ್ಬಗಳ್‌ಲಿ ಮುಖ್ಯವಾದ್ ಕಾವೇರಿ ಸಂಕ್ರಮಣ, ಕೈಲ್‌ಪೋದು ಮತ್ತೆ ಹುತ್ತರಿ ಹಬ್ಬ**

**ಕಾವೇರಿ ಸಂಕ್ರಮಣ:** ನಿಗದಿ ಮಾಡ್ದ ಸಮಯಕ್ಕೆ ಸರಿಯಾಗಿ ಕಾವೇರಿ ಮಾತೆ ಜಲರೂಪವಾಗಿ ಉಕ್ಕಿ ನಾಡ್‌ಲಿ ಹರ್ದದೆ. ಕಾವೇರಿ ಜಾತ್ರೆ ಸಾಂಪ್ರದಾಯಿಕ ಭಕ್ತಿ ಪೂರ್ಣತೆಗೆ ಸಾಕ್ಷಿ ಆಗುಟ್ಟು. ಅಂದ್ ಕಾವೇರಿ ಮಾತೆನ ಪೂಜಿಸಿ ತೀರ್ಥ ಮೀದ್ ಭಕ್ತರ್ ಪುಣ್ಯ ಪಡ್ಕಂಡವೆ. ತೀರ್ಥ ಬಂದ ಮಾರನೆ ದಿನ ಬಲಮುರಿಲಿ ಸ ಜಾತ್ರೆ

ನಡ್ದದೆ ಕಾವೇರಿ ಹೊಳೆಯಾಗಿ ಹರ್ದ್ ಬಾಕನ ಬಲಮುರಿನ ಜನ ಅವ್ಳ ತಡ್ದೊಂತ್ತೇಳುವ ಕತೆ ಉಟ್ಟು. ಮತ್ತೆ ಇದ್ ಸತ್ಯ ತೇಳಿಕೆ ಇಲ್ಲಿನ ಹೊಳೆಲಿ ಸುಳುವು ಉಟ್ಟು. ಮತ್ತೆ ಭಗಂಡೇಶ್ವರ ದೇವಸ್ಥಾನ ಸಹ ಉಟ್ಟ್.

**ಕೈಲ್ ಪೋದ್ ಹಬ್ಬ** : ಇನ್ನ ಕೈಲ್‌ಪೋದು ಹಬ್ಬಕ್ಕೆ ದೈವಿಕ ಪ್ರಾಶಸ್ತ್ಯ ಎಂತನೂ ಇಲ್ಲರು ಸ ನಮ್ಮ ಹಿರಿಯರ್ ಇದರ ಕರ್ತೃಗ. ಈ ಹಬ್ಬ ಬಾತ್ ತೇಳ್ರೆ ಗದ್ದೆ ಕೆಲ್ಸಕೆ ವಿರಾಮ ಬಿದ್ದದೆ. ಮಳೆಗಾಲದ ಕಡೇಲಿ ಬರುವ ಈ ಹಬ್ಬಕೆ ಮುಟ್ಟ ಗದ್ದೆಗಳಗಲಿ ದುಡ್ದ್ ಸೋತ ಜೀವಗಳ್‌ಗ ಆಯಾಸನ ಪರಿಹರ್ಸಿ ಸಂತೋಷದ ಸಂಜೀವಿನಿನ ನೀಡ್ದೆ. ರೈತರ್ ತಮ್ಮ ಭಾಗ್ಯ ದೇವತೆಯಾದ ಎತ್ತ್‌ಗಳ ಮೈತೊಳ್ದ್, ನೇಗಲ್ ನೊಗ ಮತ್ತೆಬ್ಯಾಸಾಯಕ್ಕೆ ಉಪಯೋಗಿಸಿದ ಸಾಮಾನುಗಳ್ನ ತೊಳ್ದ್ ಪೂಜ್‌ಸಿವೆ. ಈಗ ಆಧುನಿಕತೆನ ಪ್ರತೀಕವಾಗಿ ಟ್ರ್ಯಾಕ್ಟರ್ ಟಿಲ್ಲರ್ ಮೊದಲಾದ ಉಪಕರಣಗಳ್ನ ವ್ಯವಸಾಯ ಬಳಕೆಲಿ ಇದ್ದರೂ ಈ ಹಬ್ಬ ಕಳ್ದ ಮ್ಯಾಲೆ ಮುಂದೆ ಬರ್ವ ಬಿಸುವರ್ಗೆ ಈ ಉಪಕರಣಗಳ್ನ ಗದ್ದೆ ಹೂಡಿಕೆ ಉಪಯೋಗಿಸುದಿಲೆ. ಅಲ್ಲದೆ ಇದರೊಟ್ಟಿಗೆ ಕೊಡಗ್ ಜನರ ವೀರತನ ಗುರಾಗಿರ್‌ವ ಕೋವಿ, ಓಡಿಕತ್ತಿ ಮೊದಲಾದ ಆಯುಧಗಳ್ನ ಸಹ ಕೈಲ್‌ಪೋದ್ ದಿನ ಪೂಜೆ ಮಾಡಿವೆ.

**ಹುತ್ತರಿ ಹಬ್ಬ** : ಇದ್ ರೈತರ್ ವರ್ಷ ಇಡೀ ಕಷ್ಟಪಟ್ಟ್ ಬೆಳ್ದ ದಾನ್ಯನ ಮನೆ ತುಂಬ್ಸೊ ಸಂಭ್ರಮದ ಸುಗ್ಗಿ ಹಬ್ಬ, ಧಾನ್ಯ ಲಕ್ಷ್ಮಿನ ಪೂಜೆ ಈ ಹಬ್ಬಕ್ಕೆ ವಿಶೇಷ ಕಳೆ ನೀಡಿರೆ ಕೆಲವು ಕಡೆ ಸುಗ್ಗಿ ಕೊಣ್ತ ಅಂತೂ ಕಣ್ಣಿಗೆ ಹಬ್ಬ ನಯನ ಮನೋಹರ ಆಗಿದ್ದದೆ ಜನ ಪಟಾಕಿ ಹೊಡ್ಸಿ ಹೊಸ ಅಕ್ಕಿಂದ ಮಾಡ್ದ ಪಾಯ್ಸ ಉಂಡ್ ಹಬ್ಬನ ಆಚರ್ಸಿವೆ.

**ಪ್ರಕೃತಿ** : ಮಲೆನಾಡ್ ಮೇರ್ ಜಿಲ್ಲೆತ ಹೇಳ್‌ವ ಕೊಡಗ್ ಬೆಟ್ಟ ಗುಡ್ಡಗಳ್‌ಂದ ಆವೃತ್ತವಾಗುಟ್ಟು. ಇಲ್ಲಿನ ಜನಕೆ ಇದೊಂದು ನಿಸರ್ಗ ನೀಡ್ದ ರಕ್ಷಾಕವಚ ಹೇಳಕ್ ಇಲ್ಲಿನ ಅಪೂರ್ವ ವನರಾಸಿ ಜಿಲ್ಲೆನ ಚೆಲುವಿನ ಪೊರ್ಲುನ ಸಿರಿ ಆಗಿಸಿಟ್ಟು. ಮಳೆನೇ ವ್ಯವಸಾಯಕ್ಕೆ ನಂಬಿರ್ವ ರೈತರ್ಗೆ ವರುಣದೇವ ಎಂದೂ ಮೋಸ ಮಾಡ್ತ್‌ಲೆ. ಕೊಡಗ್‌ನ ಸುತ್ತು ಬಳ್ಸಿ ರಸ್ತೆಲಿ ಪ್ರಯಾಣ ಮಾಡ್ದು ಒಂದು ಅಪೂರ್ವ ಅನುಭವ ಕೊಟ್ಟದೆ. ಗುಡ್ಡದೆ ಮೇಲೆ ಇರ್ವ ಮಡಿಕೇರಿಂದ ಪ್ರಯಾಣ ಹೊರಟವುಕೆ ಅದೊಂದು ಮರೆಯಕ್ಕಾಗದ ಅನುಭವ ನೀಡ್ದೆ. ನಗರದ ಪೂರ್ವಕ್ಕೆ ಅಥವಾ ದಕ್ಷಿಣಕ್ಕೆ ಒಂದೆರಡ್ ಮೈಲ್ ಪ್ರಯಾಣ ಮಾಡಿರೆ ನಾವು ನಮ್ಗೆ ಗೊತ್ತೇ ಇಲ್ಲದಂಗೆ ಎಷ್ಟೋ ಅಡಿಗಳಷ್ಟ್ ಕೆಳಭಾಗಲಿ ಇದ್ದವೆ.

**ಜನಜೀವನ ಮತ್ತೆ ವ್ಯವಸಾಯ** : ಶ್ರಮ ಜೀವಿಗಳಾದ ಇಲ್ಲಿನ ಜನರ ಮುಖ್ಯ ಕಸುಬ್ ಬ್ಯಾಸಾಯ ಮತ್ತೆ ತೊಟಗಾರಿಕೆ, ಕಣ್ಣ್‌ಗೆ ನಿಲುಕದಂಗೆ ಮೈಲುಗಟ್ಟಲೆ ವಿಸ್ತೀರ್ಣಲಿ ಮೈತಳ್ದಿರುವ ಕಾಫಿ ಮತ್ತೆ ಭತ್ತದ ಗದ್ದೆಗ ಹೊರಗಿನವುಕೆ ಈ ಜಿಲ್ಲೆನ ಬಗ್ಗೆ ಅಭಿಮಾನ ಮೂಡಿಕೆ ಕಾರಣವಾಗುಟ್ಟು ಕೊಡುಗೈ ದಾನಿಗಳಾದ ಇಲ್ಲಿನ ಜನ್ರ ಸಹಾಯ ಪಡೆಯದ ಸಂಘ ಸಂಸ್ಥೆಗ, ವಿದ್ಯಾಸಂಸ್ಥೆಗ ಇರ್ಕಿಲೆ, ಕೊಡಗ್‌ನ ತೋಟಗ ಸಾವಿರಾರ್ ಜನಕೆ

ಉದ್ಯೋಗವಕಾಶ ನೀಡಿಟ್ಟು. ಕಾಫಿ ಭತ್ತದ ಒಟ್ಟಿಗೆ ಉತ್ತರ ಕೊಡಗ್‌ಲಿ ಮತ್ತೆ ದಕ್ಷಿಣ ಕೊಡಗ್‌ನ ಕೆಲವು ಕಡೆಲಿ ಯಾಲಕ್ಕಿನ ಬೆಳ್ಸಿವೆ. ಆದರೆ ಯಾಲಕ್ಕಿನ ಉತ್ಪತ್ತಿ ಮತ್ತೆ ಜಿಲ್ಲೆ ಅಸ್ಥಿರತೆ ಯಾಲಕ್ಕಿ ಬೆಳೆಗಾರ್‌ಗ್ಗೆ ನುಂಗಲಾಗದ ತುತ್ತಾಗುಟ್ಟು. ಇದ್ರಂದಾಗಿ ಕೊಡಗ್‌ಲಿ ಭತ್ತ ಬೆಳ್ದವರ ಸಂಖ್ಯೆ ಸಾಕಸ್ಟ್ ಕಮ್ಮಿ ಆಗ್ತಾ ಉಟ್ಟು. ಕೊಡಗ್‌ಲಿ ಸುಮಾರ್ 23,000 ಕಾಫಿ ಬೆಳೆಗಾರರ್ ಇದ್ದ್ ಸುಮಾರ್ 2,03,375 ಎಕ್ರೆ ವಿಸ್ತೀರ್ಣಲಿ ಕಾಫಿನ ಬ್ಯಾಸಾಯ ಮಾಡ್ತಾವಳೊ.

**ಜೇನುಕೃಷಿ** : ನೆನೆಸಿ ಕಂಬಕ್ಕನೆ ಬಾಯಿಲಿ ನೀರ್ ಬರ್ಸುವ ಇನ್ನೊಂದು ಕೊಡಗ್‌ನ ಉತ್ಪಾದನೆ ತೇಳ್ರೆ ಅದ್ ಜೇನ್ .ಅತೀ ಹೆಚ್ಚ್‌ನ ಪ್ರಮಾಣಲಿ ಅಥವಾ ಚುರ‍್ಕಾಗಿ ಕೆಲ್ಸ ಮಾಡ್‌ವವರ‍್ನ ಜೇನ್ ಹುಳಕ್ಕೆ ಹೋಲ್ಸಿವೆ ಜೇನ್ ಬಾಯಿಗೆ ಎಸ್ಟ್ ರುಚಿಕೊಟ್ಟದೆಯೊ ನಮ್ಮ ಶರಿರಕ್ಕೆ ಅಷ್ಟೇ ವಳ್ಳ ಔಸಧ ಆಗುಟ್ಟು. ಇದ್ ರೋಗನಿರೋಧಕ ಗುಣನ ಹೊಂದಿಟ್ಟು ಹಿಂದೆಂದಲೂ ಅಳಲೆಕಾಯಿ ಪಂಡಿತಂದ ಹಿಡ್ದ್ ಈಗ್‌ನ ಶಾಸ್ತ್ರೀಯ ಆಯುರ್ವೇದಿಕ್ ಔಸಧಗಳ್ಲಿ ಜೇನ್‌ನ ಬಳಕೆನ ಕಾಣಕ್, ಶೀತ ಕೆಮ್ಮು ನೆಗಡಿಗಳ್ಗೆ ಇದ್ ಸಿದ್ಧೌಷಧವಾಗುಟ್ಟುಂತೇಳಕ್ ಕೊಡಗ್‌ನ ಜೇನ್‌ಗೆ ಹೊರದೇಸಲಿ ಭಾರಿ ಬೇಡಿಕೆ ಉಟ್ಟ್. ಜೇನ್ ಹುಳದ ಮುಳ್ಳ್‌ನ ವಿಷಂದ ಚುಚ್ಚುಮದ್ದ್ ಮತ್ತೆ ಗುಳಿಗೆಳ್ನ ತಯಾರ್ ಮಾಡ್ವೆ. ಇದ್ ಸಂಧಿವಾತ, ಪಾರ್ಶ್ವವಾಯು ಮಲೇರಿಯಾ, ಶಿತ ಜ್ವರ ಮೊದಲಾದ ಕಾಯಿಲೆಳ್ಗೆ ಪರಿಣಾಮಕಾರಿತ ತಿಳ್ದ್ ಬಂದುಟ್ಟು. ಕೊಡಗ್‌ಲಿ ಇತ್ತೀಚೆಗೆ ಜೇನ್ ಕೃಷಿ ಆಗಿದ್ದು. ಇದರ ಅಭಿವೃದ್ಧಿ ಕಡ್ಸಿಕೆತ ಈಗ ಜೇನ್ ಉತ್ಸವ ಸಮ್ಮೇಳನಗ ನಡಿತಾ ಉಟ್ಟು.

ಕೊಡಗ್‌ನ ಬ್ಯಾಸಾಯಗಾರರ್ ಕೆಲವೊಮ್ಮೆ ತತ್ತರಿಸಿ ಹೋಗುವಂತ ಸಂದರ್ಭ ಇಲ್ಲದಿಲ್ಲೆ

ಒಮ್ಮೊಮ್ಮೆ ಅತಿವೃಷ್ಟಿಂದ ಭತ್ತದ ಗದ್ದೆಗಳ್‌ಲಿ ನಷ್ಟ, ಹಾಂಗೆ ಕಾಫಿ ಏಲಕ್ಕಿ ಫಸಲ ಕಮ್ಮಿಯಾಗಿ, ಆಕಾಸಕ್ಕೆ ಏರ್‌ತಿರ್ವ ಗೊಬ್ಬರ ಮತ್ತೆ ಇತರ ಅಗತ್ಯ ವಸ್ತುಗಳ ಬೆಲೆಂದಾಗಿ ಉತ್ಪತ್ತಿಗಿಂತ ಖರ್ಚ್ ಹೆಚ್ಚಾಗಿ ಬೆಳೆಗಾರರ್‌ರ ಅಂತಸ್ಥೈರ್ಯಕ್ಕೆ ಸವಲಾದು ಸಹಜವಾಗುಟ್ಟು. ಮುಕ್ತ ಮಾರುಕಟ್ಟೆಲಿ ಕಾಫಿ ಮಾರಾಟ ವ್ಯವಸ್ಥೆ ಜಾರಿಗೆ ಬಂದ ಮ್ಯಾಲೆ ಅಂತೂ ಕಾಫಿ ಯ ಬೆಲೆಲಿ ಸ್ಥಿರತೆ ಇಲ್ಲದೆ ದಿನಾ ಕಾಫಿ ರೇಟ್ ಹೆಚ್ಚ ಕಮ್ಮಿ ಆಗ್ತಾ ಇರದು ಸಾಮಾನ್ಯ ಆಗುಟ್ಟು.

ಸಾಹಸ : "ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು ಕವನ ತಿರುಕಲ್ಲಾಟ ಹಗ್ಗಕೆ ಸೆಳೆದರೊ ಹೆಬ್ಬಾವನು" ಅಂತ ಹೇಳಿ ಕವಿ ಪಂಜೆ ಮಂಗೇಶರಾಯರ್ ವರ್ಣಿಸಿದಂಗೆ ಕೊಡಗ್‌ನ ಜನ ಕಡುಗಲಿಗ, ಅಷ್ಟೇ ನಿಷ್ಠಾವಂತರ್ ಸಹ ಪ್ರಾಣಕ್ಕೆ ಪ್ರಾಣ ನೀಡ್ದ್ ತ್ಯಾಗಿಗ ಹೌದು, ನಮ್ಮ ಗುಡ್ಡೆ ಮನೆ ಅಪ್ಪಯ್ಯ ಗೌಡರ್, ನಿಡ್ಯಮಲೆ ಮುದ್ದಪ್ಪ ಜಡ್ಜ್, ಇವೆಲ್ಲಾ ಜನಾಂಗದ ಕೀರ್ತಿನ ಹೆಚ್ಚ್‌ಸಿ ಅಮರರಾದವು. ಅಲ್ಲದೆ ಇಲ್ಲಿನವುಕೆ ಶೌರ್ಯ ತೇಲ್ವು ರಕ್ತಲಿ ಹರ್ದ್ ಬಂದಕ್ಕೆ ತಲೆಮಾರ್‌ಗಳ ಹಿಂದೆದ್ ರಾಜ ಮಹಾರಾಜರುಗಳ ಕಾಲಲೂ ತಮ್ಮ ನಿಷ್ಟೆ ಶೌರ್ಯ ಸಾಹಸ್‌ಗಳ್‌ಂದ ತಮ್ಮ

ಒಡೆಯರ ಮನ ಮೆಚ್ಚಿಸಿ ತ್ಮಮ ಜಹಗೀರ್‌ಗಳ್ನ್ ಪಡ್ದ್‌ಕೊಂಡಿರ್ದು ಸಾಕ್ಷಿಯಾಗುಟ್ಟು. ನಮ್ಮ ಹಿರಿಯರ್ ರಾಷ್ಟ್ರೀಯ ಅಂತರಾಷ್ಟ್ರೀಯ ಮಟ್ಟಲಿ ಕೊಡಗ್‌ನ ಕೀರ್ತಿ ಪತಾಕೆನ ಹಾರ್‍ಸೊಳೊ.

**ಕ್ರೀಡೆ :** ಕ್ರಿಡೆಗಳ್‌ಲಿ ಕೊಡಗ್ ತನ್ನದೇ ಆದ ವೈಶಿಷ್ಟ್ಯ ಪಡ್ದುಟ್ಟು ಅವುಗಳ್ಲಿ ಕೊಡಗ್‌ಲಿ ಮಾತ್ರ ಕಂಡ್ ಬರ್ವ ಕೆಸರ್‌ಗದ್ದೆ ಓಟ ಹೆಚ್ಚ್ ಪ್ರಾಮುಖ್ಯತೆ ಪಡ್ದುಟ್ಟು ಈ ಜಿಲ್ಲೆ ಹೊರಾಂಗಣ ಮತ್ತೆ ಒಳಾಂಗಣ ಆಟಗಳ್‌ಲಿ ಸಹ ಖ್ಯಾತಿ ಪಡ್‌ದುಟ್ಟು. ಹಾಕಿ ಕ್ಷೇತ್ರಲಿ ಅಂತರಾಷ್ಟ್ರೀಯ ಮಟ್ಟಲಿ ಕೊಡಗ್‌ನ ಸಾಕಷ್ಟ್ ಆಟಗಾರರ್ ಭಾರತನ ಪ್ರತಿನಿಧಿಸೊಳೊ. ಇವರ್ಲಿ ಅರ್ಜುನ ಹಾಲಪ್ಪ, ಹರಿಪ್ರಸಾದ್, ಕಾವೇರಮ್ಮನ ರಾಯ್ ಮೊದಲಾದವು ಪ್ರಮುಖರಾಗೊಳೊ. ಹಂಗೆನೆ ಕ್ರೀಡೆಲಿ ಮಡಿಕೇರಿ ವಿಶಾಲಾಕ್ಷಿ, ಪಾಂಡನ ಶೈಲಜಾ ಮೊಣ್ಣಪ್ಪ ಇವು ರಾಷ್ಟ್ರ ಮಟ್ಟಲಿ ಸಾಧನೆ ಮಾಡಿ ಪ್ರಶಸ್ತಿ ಮಾಡ್ಯೊಳೊ.

**ಕಲೆ :** ಸಿನಿಮಾ ನಾಟಕ ರಂಗಗಳ್ಲೂ, ಕೊಡಗ್ ಜನ ಹಿಂದೆ ಬೀತ್‌ಲೆ. ಜೈ ಜಗದೀಶ್ ಮುಂತಾದವು ಸಿನಿಮಾಗಲ್ಲಿ ನಟಿಸ್ತಾವೊಳೊ. ಹಂಗೆನೆ ಸಾಹಿತ್ಯ ಸಮಾಜ ಸೇವೆ, ಶಿಕ್ಷಣ ಮುಂತಾದ ಕ್ಷೇತ್ರಗಳ್ಲಿ ಸಾಧನೆ ಮಾಡಿ ಬೈತಡ್ಕ ಜಾನಕಿ, ಬೆಳ್ಯಪ್ಪ, ಕೂಡಕಂಡಿ ಕಾವೇರಮ್ಮ ಸೋಮಣ್ಣ, ತೆಕ್ಕಡೆ ಗುಲಾಬಿ ಜನಾರ್ಧನ ಮುಂತಾದವು ಕಿತ್ತುರು ಚೆನ್ನಮ್ಮ, ರಾಜ್ಯೋತ್ಸವ ಮತ್ತಿತರ ಪ್ರಶಸ್ತಿನ ಪಡ್ದ್ ಕೊಂಡಿದ್ದ್ ಮಹಿಳೆಯರ್ ನಾವು ಯಾರಿಗೆ ಕಮ್ಮಿ ಇಲ್ಲೆತ ತೋರ್‍ಸೊಳೊ.

**ರಾಜಕೀಯ :** ಕೊಡಗ್ ಜಿಲ್ಲೆ ರಾಜಕೀಯ ಕ್ಷೇತ್ರಲೂ ಮಂಚೂಣಿಲಿ ಉಟ್ಟು, ಹಲವಾರು ಸಚಿವರ್, ಶಾಸಕರ್ನ್ ರಾಜಕೀಯ್ಯಕೆ ನೀಡ್ದ್, ಜೀವಿಜಯ ದಂಬೆಕ್ಕೋಡಿ, ಚಿಣ್ಣಪ್ಪ, ದಂಬೆಕೋಡಿ ಮಾದಪ್ಪ ಮುಂತಾದವು ಅಲ್ಲದೆ ಇದೀಗ ನಮ್ಮ ಜಿಲ್ಲೆಯ ಹೆಮ್ಮೆಯ ಪುತ್ರ ಶ್ರೀ ಕೊಂಬಾರನ ಬೋಪಯ್ಯನವು, ಮಡಿಕೇರಿ ತಾಲೂಕು ಶಾಸಕರಾಗಿ ಆ ನಂತರ ವಿರಾಜಪೇಟೆ ಶಾಸಕರಾಗಿ ಮತ್ತೆ ಕರ್ನಾಟಕ ರಾಜ್ಯ ವಿಧಾನ ಸಭಾಧ್ಯಕ್ಷರಾಗಿರ್ದು ಬಹುಶಃ ಕೊಡಗ್‌ಗೆ ಈ ಪದವಿ ಇದೇ ಮೊದಲ್‌ಂತ ಹೇಳಕ್ ಇದರಿಂದಾಗಿ ನಮ್ಮ ಕೀರ್ತಿ ಖಂಡಿತ ಹೆಚ್ಚಾಗುಟ್ಟು ಇವುಕೆ ಇನ್ನಷ್ಟು ದೊಡ್ಡ ಹುದ್ದೆಗ ಸಿಕ್ಕಲಿಂತ ಹಾರೈಸೊಮ

ನಮ್ಮ ಕೊಡಗ್‌ನ ಬಗ್ಗೆ ಹೇಳಿಕೆ ಇನ್ನು ಬಹಳಷ್ಟ್ ಉಟ್ಟು ಕೊಡಗ್‌ನ ಅಳಿಯ ಮಾಜಿ ಮುಖ್ಯ ಮಂತ್ರಿ ಶ್ರೀ ಸದಾನಂದ ಗೌಡ ಇವರ್‌ಂದ ಕೊಡ್‌ಗ್‌ಗೆ ಬಹಳಷ್ಟ್ ಉತ್ತಮ ಕೆಲ್ಸ ಆಗುಟು. ಗುಡ್ಡೆ ಮನೆ ಅಪ್ಪಯ್ಯ ಗೌಡರ ಪ್ರತಿಮೆ ಸ್ಥಾಪನೆ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಸ್ಥಾಪನೆ, ಇವೆಲ್ಲಾ ಇವು ಮುಖ್ಯಮಂತ್ರಿ ಆಗಿ ಇರ್ಕನ ಆದ ಮಹತ್ತರ ಕೆಲ್ಸಗ'

ಕಾವೇರಿಮಾತೆ, ಇಗ್ಗುತಪ್ಪ ಮತ್ತೆ ಕುಲಗುರು ಶ್ರೀ ವೆಂಕಟ್ರಮಣನ ದಯೆಯಿಂದ ನಮ್ಮ ಕೊಡಗ್‌ನ ಸಂಸ್ಕೃತಿ ಕೀರ್ತಿ ಇನ್ನಷ್ಟ್ ಹೆಚ್ಚಾಗಲಿತ ಹಾರೈಸೊಮೊ.





# ಬಾಳಪ್ಪಯ್ಯ

ಎಂ.ಜಿ ಕಾವೇರಮ್ಮ

ಬಾಳಪ್ಪಯ್ಯ ಊರಿಗೇ ದೊಡ್ಡ ಕುಳ. ನೂರ್–ನೂರೈವತ್ತ್ ಎಕ್ರೆ ಜಮೀನ್ ಅಂವಂಗಿತ್ತ್. ಗಟ್ಟಿ ಮುಟ್ಟಾದ ಮುರ ಕಲ್ಲ್‌ಲಿ ಕಟ್ಟಿದ ಮಾಳಿಗೆ ಮನೆ. ಅಂವನ ಮನೆಲಿ ಹೆಣ್ಣ್, ನಾಕೈದ್ ಸಣ್ಣ ಸಣ್ಣ ಮಕ್ಕ. ಹೆಣ್ಣ್‌ಗೆ ವೊರ್ಸ ವೊರ್ಸ ಹೆರ್‍ಗ್, ಬಸ್ರಿ ಬಾಣಂತನಾಂತ ವೊರ್ಸ ಇಡೀ ಅದ್ಕೆ ಪುರ್ಸೊತ್ತಿಲ್ಲೆ. ಅದರ ಅಪ್ಪ ಅವ್ವನೂ ಬಾಳಪ್ಪಯ್ಯನ ಮನೆಲೇ ಇರ್‍ದು. ಅವ್ಕೊ ಬೇರೆ ಯಾರ್ ಗತಿ ಇಲ್ಲೆ. ಬಾಳಪ್ಪಯ್ಯ ಒಬ್ಬ ಕಚ್ಚೆ ಹರ್‍ಕ. ಹೆಂಡ ಹೊಯ್ಕ ಜಮೀನ್ದಾರ. ಹತ್ತಿಪ್ಪತ್ತ್ ಜನ ಕೆಲ್ಸದೊವು ಅಂವನಲ್ಲಿ ಕಾಯಂ ಕೆಲ್ಸಕ್ಕೆ ಇರ್‍ತಿದ್ದೊ. ಅವ್ಕೆ ಮನೆ ಇಲ್ಲೆ ಮಠ ಇಲ್ಲೆ. ಹೆಂಡ್ರ ಮಕ್ಕ ಯಾರೂ ಇಲ್ಲೆ. ಕೇಳೊವಿಲ್ಲೆ ಹೇಳೊವಿಲ್ಲೆ. ಬಾಳಪ್ಪಯ್ಯ ಕೊಟ್ಟ ಹುಳಿ ಕಳ್ಳ್ ಕುಡ್ದ್ ಮಾಸದ ಊಟ ತಿಂದ್ ಪುಂಡು ಪೋಕ್ರಿ ಕೆಲ್ಸ ಎಲ್ಲಾ ಮಾಡ್ತಿದ್ದೊ. ಆ ಊರ್‌ಲಿ ಸುಮಾರ್ ಒಂದು ನೂರು ಕುಟುಂಬ ವಾಸ ಮಾಡಿಕಂಡ್ ಇದ್ದೊ. ಅವರ ಮನೆಲಿ ಯಾರಾದರ್ ಮೈ ನೆರ್‍ದರೆ ಅದರ ಸುದ್ದಿ ಬಾಳಪ್ಪಯ್ಯಂಗೆ ಅಂವನ ಪುಂಡು ಪೋಕ್ರಿ ಕೆಲ್ಸದೊವು ಮುಟ್ಟಸ್ತಿದ್ದೊ. ಆಗ ಬಾಳಪ್ಪಯ್ಯ ಆ ಮನೆಗೆ ಜನ ಕಳ್ಸಿ, ಹೇಳಿ ಕಳ್ಸ್‌ತಿತ್ತ್. ಆ ಗೂಡೆನ ನನ್ನ ಮನೆಗೆ ಕಳ್ಸ್‌ಂತ' ಮನೆವು ಗೂಡೆನ ಮನೆಗೆ ಕಳ್ಸದಿದ್ದರೆ ಇಂವನ ಜನಂಗ ಎಳ್ಕಂಡ್ ಬಾತಿದ್ದೊ. ಆಗನ ಕಾಲ ಹಾಂಗೆ. ಕೇಳೊವಿಲ್ಲೆ ಹೇಳೊವಿಲ್ಲೆ. ಪೇಟೆಂದ ಇಪ್ಪತ್ತ್ ಮೈಲಿ ದೂರಲಿ ಈ ಹಳ್ಳಿ ಇತ್ತ್ ಬಸ್ಸ್ ಸಂಚಾರ ಇತ್ಲೆ. ಕಾಡ್ ದಾರಿ ಹಳ್ಳಿಲಿ ನಡ್ದ ಸುದ್ದಿ ಹಳ್ಳಿಲೇ ಸತ್ತ್ ಹೋಗ್ತಿತ್ತ್. ಆಗ ಬಾಳಪ್ಪಯ್ಯಂಗೆ ಅವನ ದರ್ಪಕ್ಕೆ ಹೆದ್ರ್‌ತಿದ್ದೊ ಆ ಹಳ್ಳಿಲಿ ಇರೋವೆಲ್ಲಾ ಸಣ್ಣ ಸಣ್ಣ ಹೊಡಿ ರೈತರ್‌ಗ ಒಂದು ಮುಡಿ ಎರಡು ಮುಡಿ ಬೇಸಾಯ ಮಾಡೊವು ಪಾಪದೊವು.

ಆ ಊರ್‌ಲಿ ಕುಕ್ಕಪ್ಪ ಗೌಡ ಸಣ್ಣ ರೈತ. ಅಂವಂಗೆ ಎರ್‍ಡ್ ಮುಡಿ ಗದ್ದೆ. ನೂರು ಕಮ್ಮು ಇತ್ತ್. ಒಂದ್ ಮೊಣ್ಣ್‌ನ ಗೋಡೆನ ಬೆದ್ರ್ ಹಾಕಿದ ಮುಳಿ ಮಾಡ್‌ನ ಮನೆ ಅಂವಂಗಿತ್ತ್. ಮನೆ ಹಕ್ಕಲೆ ಹಟ್ಟಿ ಭತ್ತ

ಮಿಜಿವ ಕೊಟಗೆ, ತೋಟದೊಳಗೆ ಮೀಯಕೆ ನೀರಡಿ ಕೊಟಗೆ ಇತ್ತ್. ಅಂವಂಗೆ ಮೂರು ಜನ ಗಂಡ್ ಮಕ್ಕ ಒಂದು ಹೆಣ್ಣ್ ಗೂಡೆ ಅಕೇರಿದ್. ಅಣ್ಣಂದರಿಗೆ ತಂಗೆನೊಟ್ಟಿಗೆ ಬಾಳ ಪ್ರೀತಿ. ಕುಕ್ಕಪ್ಪ ಗೌಡನ ಹೆಣ್ಣ್ ತೀರಿ ಹೋಗಿ ಎರ್ಡ್ ವೊರ್ಸ ಆತ್. ಮನೆ ಕೆಲ್ಸ ಎಲ್ಲಾ ಮಗಳೇ ಮಾಡ್ತಿತ್ತ್ . ಅವರ ಸಂಸಾರ ಗೈದ್ ಕಂಡ್, ಉಂಡ್ ತಿಂದ್ ಕಂಡ್ ಇದ್ದ ಮಟ್ಟಿಗೆ ಸುಖಲಿ ಇದ್ದೊ. ಅಂವನ ಮಗಳ್ ಮೈ ನೆರ್ತ್. ಈ ಸುದ್ದಿ ಬಾಳಪ್ಪಯ್ಯಂಗೆ ಮುಟ್ಟಿತ್. ಅಂವ ಇವ್ಕೆ ಹೇಳಿ ಕಳ್ಸಿದೆ. ಕುಕ್ಕಪ್ಪಂಗೆ  ದಿಗಿಲಾತ್ ಅಣ್ಣಂದರಿಗೆ ಸಿಟ್ಟ್ ಬಾತ್ ತಂಗೆ ಮೊರ್ಪತ್.

"ಏನಾದರಾಗಲಿ ನಾವು ನಮ್ಮ ತಂಗೆನ ಅಂವನಲ್ಲಿಗೆ ಕಳ್ಸುದು ಬೇಡಾ"ಂತ ಅಣ್ಣಂದರ್ ಮಾತಾಡಿಕೊಂಡೊ. ಕುಕ್ಕಪ್ಪ ಗೌಡ "ಅಂವ ದುಷ್ಟ ರಕ್ಕಸ ಅಂವನ ಎದ್ರ್ ಹಾಕಂಡ್ರೆ ನಾವ್ಗೆ ಉಳಿಗಾಲ ಇಲ್ಲೆ" ಎಂತ ಹೇಳಿದೆ.

ಆದದ್ ಆಗಲಿ ಬಂದದರ ಎದ್ರುಸುದು ಎಂತ ಅಣ್ಣಂದರ್ ಹೇಳ್ದೊ. ಮರ್ದಿನ ಬಾಳಪ್ಪನ ಕಿಪ್ಪತ್ತ್ ಜನ ಬಂಟರ್ ಬಂದೊ ಇವರ ಮನೆ ಹೊಕ್ಕೊ. ಅಣ್ಣಂದರ್ ತಂಗೆನ ಕರ್ಕಂಡ್ ಗುಡ್ಡೆಗೆ ಓಡ್ದೊ. ಬಂದ ಜನಂಗ ಕುಕ್ಕಪ್ಪ ಗೌಡನ ಕೈಕಾಲ್ ಕಟ್ಟಿ ಹೊತ್ತ್‌ಕಂಡ್ ಹೋಗಿ  ಬಾಳಪ್ಪಯ್ಯನ ಎದ್ರಿಗೆ ನಿಲ್ಸಿದೊ.

ಬಾಳಪ್ಪಯ್ಯ ಗರ್ಜಿಸಿತ್ "ಎಸ್ಟ್ ಸೊಕ್ಕು  ನಿಂಗೆ ಇಷ್ಟರವರೆಗೆ ನಂಗೆ ಎದ್ರ್ ನಿಂತ್ ಬೊದ್ಕಿದೊವು ಯಾರ್ ಇಲ್ಲೆ. ನಿನ್ನ ನಾ ಬುಡಿಕಿಲೆ ನಿನ್ನ ಮನೆಗೆ ಕಿಚ್ಚಿ ಕೊಟ್ಟನೆ. ನಿನ್ನ ಆಸ್ತಿನೆಲ್ಲಾ ಬರ್ಸಿಕಣೆ. ನೀ ಹೇಂಗೆ ಬೊದ್ಕಿಯಾಂತ ನಾ ನೋಡಿನೆ. ನಿನ್ನ ಬುಡಿಕಿಲ್ಲೆ" ಎಂತ ಹೇಳಿ ಅಂವಂಗೆ ಸಮಾ ಬೊಡ್ದ್ ಅಂವನ ಒಂದು ಕೋಣೆಲಿ ಕೂಡಿ ಹಾಕಿದೊ. ಇರ್ಲ್ ಅಂವನ ಕರ್ಕಂಡ್  ಗಾಡಿಲಿ ಕುದ್ರಿಸಿಕಂಡ್ ಪೇಟೆಗೆ ಹೊರ್ಟೊ. ಬಾಳಪ್ಪಯ್ಯ, ಅಂವನ ಎರಡ್ ಭಂಟರ್‌ಗ, ಗಾಡಿ ಹೊಡ್ಯಂವ—ಇಷ್ಟ್ ಜನ ಇದ್ದೊ. ಗಾಡಿ ಎತ್ತ್‌ಗಳಿಗೆ ಬೇಗ ಹೋಕೆ, ಒಂದೊಂದು ಕೊಂಡೆ ಸರಾಯಿ ಕುಡ್ಸಿದೊ, ಅವುನೂ ಹಂಇಂಇ ಕುಡ್ಕೊಂಡೊ. ಗಾಡಿ ಪೇಟೆ ಕಡೆಗೆ ಹೊರ್ಟತ್. ಇಪ್ಪತ್ತ್ ಮೈಲ್ ದೂರಲಿ ಪೇಟೆ ಅಲ್ಲಿ ಇಂವನ ಆಸ್ತಿನ ಬರ್ಸಿಕೆ ಕರ್ಕಂಡ್ ಹೊರ್ಟೊ, ಗಾಡಿ ಎತ್ತಿಗೆ ಬೆನ್ನ್‌ಗೆ ಚಾಟಿಲಿ ಹೊಡ್ಯಕನ ಅದ್ ನಾಲ್ಕ್ ಕಾಲ್‌ಲಿ ಓಡ್ತ್. ಸುಮಾರ್ ನಡಿರ್ಲ್ ಹನ್ನೆರಡ್ ಗಂಟೆ ಆಕನ ಕುಕ್ಕಪ್ಪ ಗೌಡ "ನಂಗೆ ಉಚ್ಚೆ ಬಂದದೆ" ಎಂತ ಹೇಳ್ದೆ. ಬಾಳಪ್ಪಯ್ಯ ಗಾಡಿನವಂಗೆ ಗಾಡಿ ನಿಲ್ಸಿಕೆ ಹೇಳ್ದೆ. ಇಬ್ಬೊರು ಆಳ್‌ಗ ಕುಕ್ಕಪ್ಪ ಗೌಡನ ರಟ್ಟೆ ಹಿಡ್ಕಂಡ್ ಗಾಡಿಂದ ಇಳ್ದೊ. ರಸ್ತೆ ನಡುಲಿ ಪುಡೆಲಿದ್ದ ಮರಗಳ ಎಡೆಲಿ ಅಂವನ ಕರ್ಕೊಂಡೋಗಿ ನಿಲ್ಸಿ 'ಬೇಗ ಹೊಯ್' ಎಂತ ಹೇಳ್ದೊ. ಅಂವ ಉಚ್ಚೆ ಹೊಯ್ಯಕೆ ಸುರು ಮಾಡ್ದೆ. ಉಹುಂ ಅವಂಗೆ ಏನ್ ಮಾಡ್ರೂ ಉಚ್ಚೆ ಬಾದುಲ್ಲೆ 'ನೀವು ಇಲ್ಲೆ ನಿಂತರೆ ನಂಗೆ ಉಚ್ಚೆ ಬಾದ್ಲೆ" ಎಂತ ಅಂವ ಹೇಳ್ದೆ.

'ನಿನ್ನ ಸಾವು' ಎಂತ ಹೇಳಿ ಆಳ್‌ಗ ಇಂವಂದ ದೂರಲಿ ನಿಂತ್‌ಕಂಡ್ ಬೀಡಿ ಹೊತ್ತಿಸಿಕಂಡ್ ಮಾತಾಡಿಕೊಂಡಿದ್ದೊ ಎಷ್ಟ್ ಹೊತ್ತಾದರೂ ಕುಕ್ಕಪ್ಪ ಗೌಡ ಬಾತ್ಲೆ

ಬಾಳಪ್ಪಯ್ಯ ಗಾಡಿಂದ 'ಅಲ್ಲೇನ್ ಮಾಡ್ರೆ ಬೇಗ ಬನ್ನಿ– ಎಂತ ಗದ್ರಿಸಿದೆ .ಆಳ್‌ಗ ತಿರ್ಗಿ ನೋಡ್ವೆ. ಕುಕ್ಕಪ್ಪ ಗೌಡ ಕಾಂಬೊದಿಲ್ಲೆ. ಅವ್ಕೆ ಗಾಬರಿ ಆದೆ ಅವು

"ಕುಕ್ಕಪ್ಪಾ, ಕುಕ್ಕಪ್ಪಾ" ಎಂತ ಜೋರಾಗಿ ಕರ್ದವೆ. ಸುದ್ದಿ ಇಲ್ಲೆ ಸುತ್ತೊಳೂ ಹುಡ್ಕಿವೆ. ಕತ್ತಲೆ ಬೇರೆ. ಎಲ್ಲಿಂತ ಹುಡ್ಕುದು? ಅಷ್ಟಾಕನ ಏನೋ ಎಡವಟ್ಟಾಗುಟ್ಟೂಂತ ಬಾಳಪ್ಪಯ್ಯಂಗೆ ಗೊತ್ತಾದೆ. ಅಂವ ಗಾಡಿಂದ ದುಡುದುಡು ಇಳ್ಕಂಡ್ ಬಂದ್,

"ಏನಾತ್ ? ಅಂವ ಎಲ್ಲಿ" ಎಂತ ಕೇಳ್ದೆ. ಆಳ್‌ಗ ಮೋರೆ ಮೋರೆ ನೋಡಿಕಂಡ್ ತಲೆ ತಗ್ಗಿಸಿದೊ. ಬಾಳಪ್ಪಯ್ಯ ಸಿಟ್ಟ್‌ಂದ ಆಳ್‌ಗಳ ಕೆನ್ನೆಗೆ ಬೀಸಿ ಬಾರ್ಸಿದೆ.

"ಘೂಂತೇರಿ ಹುಡ್ಕಿನಿ– ಎಂತ ಬೊಯ್ದ್ ಅಂವನೂ ಹುಡ್ಕಿಕೆ ಹೊರ್ಟದೆ ಅವ್ಕೆ ಯಾರಿಗೂ ಕುಕ್ಕಪ್ಪ ಸಿಕ್ಕಿತಿಲ್ಲೆ. ಅವು ಬಂದ ದಾರಿಗೆ ಸುಂಕ ಇಲ್ಲೆಂತ ಊರಿಗೆ ಬಂದವೆ. ಸಿಟ್ಟ್‌ಂದ ಕುಕ್ಕಪ್ಪ ಗೌಡನ ಮನೆಗೆ ಬಾಳಪ್ಪಯ್ಯ ಜನ ಕಳ್ಸಿದೆ.

ಮನೆಲಿ ಯಾರೂ ಇತ್ಲೆ ಮನೆಗೆ ಸಂಕೊಲೆ ಕೋಸಿ ಬೀಗ ಹಾಕಿದ್ದೊ. ಬಾಳಪ್ಪಯ್ಯನ ಆಳ್‌ಗ ಸಿಟ್ಟ್‌ಂದ ಮನೆಗೆ ಕಿಚ್ಚಿಕೊಟ್ಟ್ ಬಂದವೆ.

ಇತ್ತ ಕುಕ್ಕಪ್ಪ ಗೌಡ ಕೈಲಿ ಜೀವ ಹಿಡ್ಕಂಡ್ ಕಾಡ್‌ಲಿ ಒಂದೇ ಸಮ ಓಡ್ದೇ ಓಡ್ದ. ಕತ್ತಲೆ ಬೇರೆ ದಾರಿ ಸಿಕ್ಕಿದಲೆಲ್ಲಾ ಓಡ್ದೆ. ಹಗ್ಲ್ ಇಡೀ ಊಟನೂ ಇಲ್ಲೆ. ಮೈಮೇಲೆ ಬಿದ್ದ ಪೆಟ್ಟ್‌ನ ಬೇನೆ ಬೇರೆ. ಈಗ ಅಂವಂಗೆ ಅದ್ಯಾವುದೂ ಲೆಕ್ಕಕ್ಕಿಲ್ಲೆ. ಜೀವ ಉಳ್ದರೆ ಸಾಕಾಗುಟ್ಟು. ಬೊಳ್ಪಾಕನ ಒಂದು ಹಳ್ಳದ ದಂಡೆಲಿ ಬಂದ್ ನಿಂತದೆ. ಅದ್ ಯಾವ ಊರ್‌ಂತ ಗೊತ್ತಾತ್ಲೆ. ಅಂದ್ ಹಳ್ಳಲಿ ಮಿಂದ್ ಹೊಟ್ಟೆ ತುಂಬಾ ನೀರ್ ಕುಡ್ದದೆ. ಆಗ ಕೆಲವು ಜನ ಹಳ್ಳ ದಾಟೊವು, ದಾರಿ ಹೋಗೊವು ಬಂದೊ. ಅವರಲ್ಲಿ ಅಂವ ವಿಚಾರ್ಸಿದೆ. ಇದ್ ಯಾವ ಊರ್‌ಂತ. ಅವು ಊರ್‍ನ ಹೆಸ್ರ್ ಹೇಳ್ವೆ. ಆಗ ಅಂವಂಗೆ ನೆಂಪಾತ್. ಆ ಊರ್‌ಗೆ ಅಂವನ ಸೋದರತ್ತೆನ ಕೊಟ್ಟೊಳೊ. ಸಣ್ಣದಿರಿಕನ ಅಂವನ ಅಪ್ಪನೊಟ್ಟಿಗೆ ಸೋದರ ಅತ್ತೆನ ಮನೆಗೆ ಹೋದ ನೆಂಪು. ಅತ್ತೆ ಸತ್ತೋಗುಟ್ಟು. ಅದರ್‌ಂದ ಮೇಲೆ ಸುದ್ದಿ ಇಲ್ಲೆ. ಅಂವ ಆ ಊರೊಳಗೆ ಹೋಗಿ ಅವನ ಅತ್ತೆನ ಗಂಡನ ಹೆಸ್ರೇಳಿ ವಿಚಾರ್ಸಿದೆ. ಅವಂಗೆ ಮನೆ ಸಿಕ್ಕಿದೆ. ಅಲ್ಲಿಗೆ ಹೋಗಿ ಅವರಕ್ಕಲೆ ಗುರ್ತು ಹೇಳ್ದೆ. ಅವ್ಕನೂ ಈ ಹಳೆ ನೆಂಟನ ನೋಡಿ ಬಾಳ ಕುಸಿ ಆದೆ ಅತ್ತೆನ ಮಕ್ಕ ಇಂವಂಗೆ ಉಂಬಕೆ, ತಿಂಬಕೆ ಕೊಟ್ಟ್ ಉಪಚಾರ ಮಾಡ್ವೆ ಹಿಂದೆನ ದಿನ ಇಡೀ ದಿನ ಉಪವಾಸ ಇದ್ದ ಇಂವಂಗೆ ಹೊಟ್ಟೆಗೆ ಬೀಳಿಕಾಕನ ಜೀವ ಬಂದಾಂಗಾತ್. ಕುಕ್ಕಪ್ಪ ಗೌಡ ಅವ್ಕೆ ಎಲ್ಲಾ ವಿಷಯ ತಿಳ್ಸಿದೆ. ಬಾಳಪ್ಪಯ್ಯನ ದುಷ್ಟತನದ ಕತೆ ಅವರ ಊರಿಗೂ ಹಬ್ಬಿತ್.

"ಅಂತವನ ಇಸಿ ಕಾಗದ್ ಕಾಡ್ ಮೃಗನ ಬೇಟೆ ಆಡ್ದಂಗೆ ಹೊಡ್ದ್ ಸಾಯ್ಸೊಕು. ನಮ್ಮ ಗೌಡ್ರುಗಳ ಗೂಡೆಗಾಂತೇಳ್ರೆ ಅವ್ಕೆ ಬಾಳ ಸಸಾರ." ಎಂತ ಸಿಟ್ಟ್‌ಲಿ ಹೇಳ್ದೊ. ಅಲ್ಲಿಂದ ಉಂಡ್‌ದ್ ಅವು ಎಷ್ಟ್ ಹೇಳ್ರೂ ನಿಲ್ಲದೆ ಕುಕ್ಕಪ್ಪ ಗೌಡ ಅಂವನ ಹೆಣ್ಣ ಕೊಟ್ಟ ಮಾಂವನ ಮನೆಗೆ ಹೊರ್ಟದೆ. ಆ ಊರುನೂ ಅಲ್ಲಿಂದ ನಾಲ್ಕೈದ್ ಮೈಲಿ ದೂರ ಇತ್. ಅಂವ ಮಾವನ ಮನೆಗೆ ಬಾಕಾಕನ ಕತ್ತಲೆ ಆಕಾಗುಟ್ಟು. ಅಲ್ಲಿ ಅಂವನ ನಾಕ್

ಮಕ್ಕಳೂ ಇದ್ದೊ. ಅವುನೂ ಗುಡ್ಡೆ ಹತ್ತಿದೊವು ಎಲ್ಲಿಗೆ ಹೋದೂಂತ ತಿಳ್ಯದೆ ಸೋದರ ಮಾಂವನ ಮನೆಗೆ ತಂಗೆನೆ ಕರ್ಕಂಡ್ ಬಂದಿದ್ದೊ. ಅವರ್ನ ಎಲ್ಲಾ ನೋಡಿ ಕುಕ್ಕಪ್ಪಂಗೆ ಸಮಾಧಾನ ಆತ್. ಇರ್ಲ್ ಎಲ್ಲವೂ ಉಂಡ್ ಎದ್ದೊ. ಕುಕ್ಕಪ್ಪ ಗೌಡ ನಡ್ದ ಕತೆ ಎಲ್ಲಾ ಹೇಳ್ತ್. ಆಗ ಕುಕ್ಕಪ್ಪನ ಭಾವ ಮೈದ ಹೇಳ್ದ "ನಿಮ್ಮ ಮನೆ ಮಟನೆಲ್ಲಾ ಕಿಚ್ಚಿ ಹಾಕಿ ಸುಟ್ಟ್ ಹಾಕ್ಯೊಳೊ ಗಡ ನಂಗೆ ಸುದ್ದಿ ಸಿಕ್ಕಿತ್" ಎಂತ ಅದರ ಕೇಳಿ ಕುಕ್ಕಪ್ಪ ಗೌಡಂಗೆ ಬಾಳ ದುಃಖ ಆದೆ. ಅಂವನ ಅಕ್ಕಿ ಮುಡಿ, ದವಸಧಾನ್ಯ ಬಟ್ಟೆ ಬರೆ, ಪಾತ್ರೆ ಪಗಡಿ ಎಲ್ಲಾ ಸುಟ್ಟ್ ಬೂದಿ ಆಗುಟ್ಟೂಂತ ತಿಳ್ದ್ ಕಣ್ಣ್‌ಲಿ ನೀರ್‌ಬಂದದೆ.

"ಇನ್ ಅಂವನ ಇಸಿಕಾಗದ್. ಏನ್ ಮಾಡ್ದು? ಕುಕ್ಕಪ್ಪ ಗೌಡ ಕೇಳ್ದೆ.

"ಮಾಂವಾ ನೀವ್ ಹೆದ್ರ್‌ಬೊಡಿ ನಿಮ್ಮ ಸಹಾಯಕೆ ನಾವು ಒಳೊ. ಅವಂಗೆ ಒಂದು ಗತಿ ಕಾಣ್ಸುವವರೆಗೆ ನೀವು ಇಲ್ಲೇ ಇರಿನಿ" ಎಂತ ಬಾವ ಮೈದ ಕುಕ್ಕಪ್ಪ ಗೌಡಂಗೆ ಸಮಾಧಾನ ಮಾಡ್ವೆ.

ಎಲ್ಲೊವೂ ಕುದ್ದು ಮಾತಾಡ್ವೆ ಕುಕ್ಕಪ್ಪ ಗೌಡ ದೊಡ್ಡ ಮಂಜನೂ, ಭಾವ ಮೈದನ ಮಂಜನೂ ಇಬ್ಬೊರು ಹೆಗ್ಲ್‌ಲಿ ಜೋಡು ನಳಿಗೆ ತೋಟೆ ಬೆಡಿನ ಕೋಸಿಕಂಡ್ ಹೊರ್ಟವೆ. ಗುರುಕಾರ್ನೂರ್‌ಗೆ ಅಗಳ್ ಹಾಕಿ ಕೈ ,ಮುಗ್ದ್ ನಮ್ಮ ಕಲ್ಸಕ್ಕೆ ಜಯಕೊಡೀಂತ ಕೇಳಿಕಂಡ್, ಹಿರಿಯರ ಕಾಲ್ ಹಿಡ್ಕಂಡ್ ಅವಿಬ್ಬರೂ ನಡೀರ್ಳ್ ಹೊರ್ಟವೆ. ಉಳ್ದೊವೆಲ್ಲಾ ಮೇಲೆ ನೋಡಿ ಕೈ ಮುಗ್ದ್ ಅವರ ಕಳ್ಸಿ ಕೊಟ್ಟವೆ, ಅವು ಕುಕ್ಕಪ್ಪ ಗೌಡನ ಊರಿಗೆ ಬಂದವೆ. ಅವರ ಮನೆ ಹಕ್ಕಲೆ ಬಾಕನ ಅಲ್ಲಿನ ಅವಸ್ಥೆ ನೋಡಿ ಹಲ್ಲ್ ಕಚ್ಚುವೆ. ಕತ್ತಲಾಕನ ಅಲ್ಲಿಂದ ಸೀದಾ ಹೋಗಿ ಬಾಳಪ್ಪಯ್ಯನ ಮನೆ ಹಕ್ಲೆ ಇರುವ ನೀರೆಡಿ ಕೊಟಗೆ ಹಕ್ಕಲೆ ಬಂದವೆ. ಅಲ್ಲಿ ಬಾಳೆ ಬುಡಲಿ ಕಾದ್ ಕುದ್ದವೆ. ಆದಿನ ಇರ್ಳ್ ಇಡೀ ಕಾದ್ ಕುದ್ದವೆ. ಬಾಳಪ್ಪಯ್ಯ ಕಣ್ಣ್‌ಗೆ ಬೀತ್ಲೆ. ಹಗಲ್ ಇಡೀ ಕಾದ್ ಕುದ್ದವೆ. ಆ ದಿನ ಹಗಲ್ ಇಡೀ ಗುಡ್ಡೆಲಿ ಕಳ್ದವೆ. ಇರ್ಳಾಕನ ಬಾಲಪ್ಪಯ್ಯನ ಮನೆ ಹಕ್ಕಲೆ ಬಂದ್ ಕಾದ್ ಕುದ್ದವೆ. ಮೂರು ಇರ್ಳ್ ಕುದ್ದರೂ ಏನ್ ಪ್ರಯೋಜನ ಆತ್ಲೆ. ಇರ್ಳ್ ಇಡೀ ಬಾಳಪ್ಪಯ್ಯನ ಮನೆಲಿ ಅವನ ಭಂಟ್ರ್‌ಗ ತಿಂದ್‌ಕಂಡ್ ಕುಡ್ಕಂಡ್ ಅಟ್ಟಹಾಸ ಹಾಕಿಕಂಡ್ ಇರ್ದರ ಕೇಳಿಕಂಡ್ ದಿನ ಕಳ್ದ್. ನಾಕ್ನೇ ದಿನ ಇರ್ಳ್ ಬಾಳಪ್ಪಯ್ಯ ಉಂಡ್‌ದ್ ಕೈ ತೊಳ್ಯಕೆ ಹೊರಗೆ ಬಂದ್ ನಿಲ್ಲಕಾಕನ ಇವರ ಕಣ್ಣ್‌ಗೆ ಬಿದ್ದದೆ. ಇವು ಕುದ್ದಲಿಂದಲೆ ಹೊಡ್ದ ಢಂ ಢಮಾರಂತ ಬಾಳಪ್ಪಯ್ಯನ ಎದೆಗೆ ಎರ್ಡ್ ಗುಂಡುಗ ಬಿದ್ದೊ ಅಂವ ಅಲ್ಲೇ ಬೀತ್. ಸದ್ದ್ ಕೇಳಿ ಮನೆವೆಲ್ಲಾ ಓಡಿ ಬಂದೊ. ಇವು ಅಲ್ಲಿಂದ ಪರಾರಿ.

ಬಾಳಪ್ಪಯ್ಯ ಸತ್ತ್‌ತ್‌ಂತ ತಿಳ್ದ್ ಊರಿಗೆ ಊರೇ ಕುಸಿಪಟ್ಟತ್. ಒಂದು ವಾರ ಕಳ್ಯಕನ ಪೊಲೀಸರ್ ಬಂದೊ. ಯಾರೊಬ್ಬರೂ ಸಾಕ್ಷಿ ಹೇಳ್ತಿಲೆ. ಯಾರ್ ಕೊಂದದ್‌ಂತ ಗೊತ್ತೇ ಆತ್ಲೆ. ಬಾಳಪ್ಪಯ್ಯ ಹುಲಿ ಹಾಂಗೆ ಇದ್ದಂವ ನಾಯಿ ಸತ್ತಾಂಗೆ ಸತ್ತತ್

ಊರೊವೆಲ್ಲಾ ಊರ್‌ಂದ ಒಂದು ದೊಡ್ಡ ಮಾರಿ ಹೋತ್‌ಂತ ದೇವ್ರಿಗೆ ಕೈಮುಗ್ದೊ.



# ಗಾಳದ ಮೊಲ್ರ್

ಯೋಗೀಶ ಹೊಸೊಳಿಕೆ

ಹಳ್ಳಕೆ ಗಾಳ ಹಾಕಿಕೆ ಹೋದವೆ
ಸೂಟೆ ಮೀನೂನು ಕಡ್ದವೆ
ಬಲೇನೂ ಬೀಸುವೆ ತೋಟೆನೂ ಹಾಕುವೆ
ಹಳ್ಳಲಿ ಮುಳುಗಿ ಎದ್ದವೆ ಬಾವ
ಎಂತ ಮೊಲ್ರ್ಯ ಬಾವ
ಎಂತ ಮೊಲ್ರ್

ನಾಗರ ಪಂಚಮಿನೆ ಇರ್ಲಿ
ಷಷ್ಠಿ ಪಂಚಮಿನೇ ಆಗಿರ್ಲಿ
ಅಮಾಸೆ ಕೆಡ್ಡಸನೇ ಬರ್ಲಿ
ಸಂಕ್ರಮಣ ತಿಂಗ್ಲಿಡಿ ಆಗಿರ್ಲಿ
ನೀವೂ ಹಳ್ಳದ ಕರೆಲಿಯಾ ಬಾವ
ಎಂತ ಮೊಲ್ರ್ಯ ಬಾವ
ಎಂತ ಮೊಲ್ರ್

ಗಿಡ್ಡ ಕೈ ಅಂಗಿ ಹಾಕುವೆ ಬಾವ
ಮುಕ್ಕಾಲು ಚೆಡ್ಡಿನು ಮುಂಡಾಸುನ್ ಉಟ್ಟು
ಬಾಯಿ ಮುಟ್ಟ ಎಲಾಡಿಕೆ ತುಂಬಿಸಿಯೊಳರಿ
ಎಂತ ಮೊಲ್ರ್ಯ ಬಾವ
ಎಂತ ಮೊಲ್ರ್

ಒಂದು ಕೈಲಿ ಸಂಗೀಸ್ ಚೀಲ
ಕುಂಞ ಕತ್ತಿನೂ ಹಿಡ್ದ್
ಹೊಂಬೊತ್ತು ಕಟ್ಟಿದ ಬಲೆ ನೋಡಿಕೆ
ಹೊರ್‌ಟೊಳಯ ಬಾವ
ಎಂತ ಮೊಲ್ರ್ಯ ಬಾವ

ಎಂತ ಮೊಲ್ರ್
ಜಿರಿ ಜಿರಿ ಮಳೆನೇ ಬರ್ಲಿ
ನಡ್ಗುವ ಚಳಿನೇ ಇರ್ಲಿ



ಹೊತ್ತುವ ಬಿಸಿಲೇ ಆಗಿರ್ಲಿ
ನೀವೂ ಹಳ್ಳದ ಕರೆಲಿಯಾ
ಎಂತ ಮೊರ್ಲುಯ ಬಾವ
ಎಂತ ಮೊರ್ಲು
ನೆರೆಕರೆವುಕೆ ಒಂದೂ ಮೀನು ಕೊಡಿಕಿಲೆ
ಸೊಂಟಲಿ ಕಟ್ಟಿಕಣ್ ಮೀನೆ ಇಲ್ಲೆತ
ಕಣ್ಣಿಚಾಯ ಕುಡ್ದ್ ಹೋದವೆ
ಮನೆಗೆ ಹೋದರೆ ಗೈಪು ಕೊಟ್ಟವೆ
ಗಂಜಿಂದ ಜಾಸ್ತಿ ಗೈಪೂನ ತಿಂದವೆ
ಎಂತ ಮೊರ್ಲುಯ ಬಾವ
ಎಂತ ಮೊರ್ಲು
ಹಿಂದೆ ಕಾಡು ಮೃಗಗಳ ಬೇಟೆನೂ ಇತ್ತ್
ಹಂದಿ ಕೆಂಪ ಬೊರಿಕನ ಹೊಡ್ದಳೋ
ದಿನಲ್ಲಿ ಮೂರು ಸರ್ತಿ ಕಾಡಿಗೆ ಹೋದರೆ
ಮೂರು ಮೃಗಗಳ ಹೊಡ್ದ ದಿನ ಉಟ್ಟುತ
ಅವು ವಾರ್ತೆ ಓದುವೆ
ಎಂತ ಮೊರ್ಲುಯ ಬಾವ
ಎಂತ ಮೊರ್ಲು
ಜಡಿಕುಟ ಮಳೆನೇ ಬರ್ಲಿ
ಜಾರುವ ಪಾಂಬೊಜಿ ಪಾಲನೇ ಇರ್ಲಿ
ಚೆಂಡೆ ಮುಳ್ಳು, ಮುಂಡೋವು ಬಲ್ಲೇನೇ ಇರ್ಲಿ
ಬೆದುರು ವಾಟೆನೆ ಅಡ್ಡ ಬರ್ಲಿ
ಏನೇ ಇರ್ಲಿ ಬೊಗ್ಗಿ ಸೇರೇಲಿ ಹುಗ್ಗಿ
ಗಾಳ ಹಾಕುವೆಯಾ ಬಾವ
ಎಂತ ಮೊರ್ಲುಯ ಬಾವ
ಎಂತ ಮೊರ್ಲು
ಹೆಂಣ್ - ನಾಯಿಗೆ ಬ್ಯೊದಂಗೆ ಬ್ಯೊದವೆ
ಗಾಳಕೆ ಹೋಕನ ನೆಲಕ್ಕೈ ಬೊಡ್ದವೆ
ನೆರೆಕರೆವು ಬಾವ ಕಾಣೆಯಾದರೆ
ಹಳ್ಳದ ಕರೆಲಿ ಹುಡುಕುಡುತ್ತಾ
ಬಾಯಿಬುಟ್ಟು ನೆಗಾಡವೆ
ಎಂತ ಮೊರ್ಲುಯ ಬಾವ
ಎಂತ ಮೊರ್ಲು





ಹರಟೆ

# ಅಂದರೆ ನೀವು ಓಟ್ ಹಾಕಿರಲ್ಲಾ?

ಭವಾನಿಶಂಕರ ಅಡ್ತಲೆ

"ಮಕ್ಕಳೇ.... ಏ ಮಕ್ಕಳೇ.... ಎಲ್ಲಿ ಹೋದೆರಿನೇ.. ಒಮ್ಮೆ ಇವ್ಕೆ ಶಾಲೆ ಆದರೆ ಸಾಕ್. ಮನೇಲಿದ್ದ್ ಮಾಡಿಕೆಂತ ಇಲ್ಲೆ. ಕರ್ದರೆ ಒಂದೂ ಬಾರಟಿಲ್ಲೆ. ಎಲ್ಲಿಂದಲೋ ಕಾ.. ಕೂ..ಂತ ಮಾತ್ರ ಕೇಳ್ದೆ. ಒಂದು ಜಾತಿ ಕ್ರಿಕೆಟ್ ಆಡ್ದು, ಟಿವಿ ನೋಡ್ದು ಬುಟ್ಟರೆ ಒಂದು ಗ್ಲಾಸ್ ಬಾಯಿಗೆ ನೀರ್ ಕೊಡಿಕೆ ಕರ್ದರೆ ಇಲ್ಲೆ". ಅಣ್ಣಿ ಅಜ್ಜ ಪರ್‌ಂಚಿಕೆ ಶುರು ಮಾಡ್ದೊ.

ಮಕ್ಕ ಎರಡ್ ಒಟ್ಟಿಗೆ ಓಡಿ ಬಂದ್ "ಎಂತ ಉಗ್ಗಪ್ಪ ಕರ್ದರಾಂತ" ಕೇಳ್ದೊ. "ಇಂದಾ ಮಂಜ, ಎಲೆ ಅಡ್ಕೆ ತಿಂದ್ ಚೂರು ತಲೆಗೆ ಹಿಡ್ದಾಂಗೆ ಆತ್. ಒಂದು ಚೂರು ನೀರ್ ತನ್ನಿ ಮಂಞ". ಅಜ್ಜನ ಮೋರೆಲಿ ಬೆಗ್ರ್ ಹನಿ ಸಾಲು ನಿತ್ತ್‌ಟು. ಮೊಣ್ಣು ಚೆಂಟೇಲಿ ಶಿಲ್ವೆ ಮರದ ಮಣೆನ ಒರ್ಗಿಸಿ ಇಸಿ ಅಣ್ಣಿ ಅಜ್ಜ ಹಾಂಗೆ ತಲೆ ನೀಂಡಿ ಮಲ್ಗಿದಾಂಗೆ ಮಾಡ್ತ್. ಮಕ್ಕ ದೊಡ್ಡ ಕಂಚ್‌ನ ಚೊಂಬುಲಿ ನೀರ್ ತಂದ್ 'ಇಂದೆನಿ ಉಗ್ಗಪ್ಪ ಕುಡಿನಿಂತ' ಕೊಟ್ಟೊ. ಅಜ್ಜ ಒಂದು ಚೊಂಬು ನೀರ್‌ನ ಪೂರಾ ಕುಡ್ದೊ. 'ಅಯ್ಯನಬಂಡೆ, ನನ್ನ ಜೀವನೇ ಹೋತ್‌ಂತ' ಗೇನ ಮಾಡ್ದೇಂತ ಹೇಳಿ, ಮಕ್ಕಳೊಟ್ಟಿಗೆ, ಇಂದ ಬಾ ಇಲ್ಲಿ ಒಲೆ ಹಕ್ಕಲೆ ಕಾಯಿ ಒಡ್ದ್ ಇಸಿದ್ ಇದ್ದರೆ ಒಂದು ಹೋಳ್ ತನ್ನಿ ಮಂಜ. ಕಾಯಿ ಹೋಳ್ ತಿಂದರೆ ಅಡ್ಕೆ ಸೊಕ್ಕಿರೆ ನಿಂತದೆಂತ ನನ್ನ ಅಪ್ಪ ಹೇಳ್ತಿದ್ದೊ."

"ನಿಮ್ಮ ಅಪ್ಪ ಈಗ ಎಲ್ಲಿ ಒಳೋ ಉಗ್ಗಪ್ಪ?" ಸಣ್ಣ ಪಿಳ್ಳಿ ಕೇಳ್ತ್.

ನನ್ನ ಅಪ್ಪ ಯಮಂಗೆ ಪಾರಕ್ಕೆ ಹೋಗೊಳೊ. ಅವುಕೆ ಬೊಚ್ಚಿಕಾಕನ ನಾ ಹೋಕು. ನಂಗೆ ಬೊಚ್ಚಿಕಾಕನ ನಿನ್ನ ಅಪನ ಕಳ್ಸ್. ಈ ಮಕ್ಕಳಿಗೆ ಇರ್ದೇ ಅಧಿಕ ಪ್ರಸಂಗ".

"ಉಗ್ಗಪ್ಪ.... ಉಗ್ಗಪ್ಪ.... ನೀವು ನಾಳೆ ಓಟು ಹಾಕಿಕೆ ಹೋದುಲೆನಾ?" ದೊಡ್ಡ ಪಿಳ್ಳಿ ಕೇಳ್ತ್

"ಓಟು.... ನಿಮ್ಮ ಓಟು ತೂಲ ಕಾಲ್ ಹೆಟ್ಟಿತ್. ಅಲ್ಲಿ ಹೋದರೆ ದಾರೀಲಿ ಹೋಡೇಕೆ ನಿಂತ್ತಾಂಗೆ ಜನ ಇದ್ದವೆ. ನಂಗೆ ಸರಿ ಕಣ್ಣುನೂ ಕಾಂಬೊದ್ಲೆ. ಅದ್ಕೆ ಕೊಡಿ, ಇದ್ಕೆ ಕೊಡಿ. ಇದೇ ಕೆಲ್ಸ ಅವುಕೆ. ನನ್ನ ಜೀವನಲಿ ಕಮ್ಮಿ ತೇಳಿರೂ ಒಂದು ನೂರು ಸರ್ತಿ ಓಟು ಹಾಕಿರುವೆ. ನಂಗೆ ಸಾಕಣ್ಣ ಇನ್ ನಿಮ್ಮ ಓಟೂನೂ ಬೇಡ, ಬೂಟುನೂ ಬೇಡ". "ಹಾಂಗಲ್ಲ ಉಗ್ಗಪ್ಪ.... ಅದ್ ನಿಮ್ಮ ಹಕ್ಕ್ ಅಲ್ಲನಾ? ನಿಮ್ಮ ಕರ್ಕಂಡ್ ಹೋಕೆ ಜೀಪು ಬಂದದೆ ಗಡ". "ನಿಮ್ಮ ಜೀಪು ಬೇಡ, ಕಾರುನೂ ಬೇಡ. ನಾ ಓಟು ಕೊಟ್ಟದ್ ಸಾಕ್‌ಂತ ಹೇಳ್ದಲ್ಲಾ.." ಉಗ್ಗಪ್ಪ ದೊಡ್ಡ ಸ್ವರಲಿ ಮಕ್ಕಳಿಗೆ ಹೆದ್‌ರ್ಸಿದೊ.

"ಅಲ್ಲ ಉಗ್ಗಪ್ಪ ನೀವುಗೆ ಓಟು ಹಾಕಿಕೆ ಬಂಗ ಆದರೆ ಅಪ್ಪನ ಕರ್ಕೊಂಡೋಗಿ. ನಿಮ್ಮ ಬದ್‌ಲಿಗೆ ಅವು ಓಟು ಹಾಕುವೆ".

ಅದೆಲ್ಲಾ ಸರಿ ಮಾರಾಯ. ಈಗ ಮುಂದೆನಾಂಗೆ ಸುಲಭಲಿ ಓಟು ಹಾಕಿಕೆ ಆದುಲೆ. ಅಲ್ಲಿ ಸಾಲ್ ನಿಲ್ಲೋಕು, ಒಳಗೆ ಹೋಕನ ರೊಟ್ಟಿ ಕುಕ್ಕೆ, ಕೋಳಿ ಗೈಪು ಅಳೆಗೆ ಇಸಿ ಕುದ್ದಾಂಗೆ ನಾಲ್ಕೈದ್ ಜನ ಕುದ್‌ಕಂಡ್ ಇದ್ದವೆ. ಒಬ್ಬ ಕೈ ತೋರ್ಸಿ ತೇಳ್ದು. ಇನ್ನೊಬ್ಬ ನಿಮ್ಮ ಕಾರ್ಡ್ ಕೊಡಿತೇಳ್ದು. ಮತ್ತೊಬ್ಬ ಅಲ್ಲಿಗೆ ಹೋಬೊಡಿ. ಇಲ್ಲಿಗೆ ಹೋಗಿಂತ ಹೇಳ್ದು. ಮತ್ತೊಬ್ಬ ಎಂತದೋ ದೊಡ್ಡ ಹಾರ್ಮೊನಿ ಪೆಟ್ಟಿಗೆನಾಂಗೆ ಇದ್ದದರ ಇಸಿ ಇದರ್‌ಲ್ಲಿ ಯಾದಾರ್ ಒತ್ತಿಂತ ಹೇಳ್ದು... ಇದೆಲ್ಲ ಬರಿ ರಗಳೆ ಕೆಲ್ಸ

ಅದ್ಕೆ ಹೇಳ್ದ್ ಉಗ್ಗಪ್ಪ.... ಅಪ್ಪನ ಕರ್ಕೊಂಡ್ ಹೋಗಿಂತ.. ದೊಡ್ಡ ಪಿಳ್ಳಿ ಮತ್ತೆ ಹೇಳಿಕಾಕನ .. ನಿನ್ನ ಅಪ್ಪಂಗೆ ಮೀಸೆ ಎಳೆಕೆ ನಾ ಯಾಕೆ ಕರ್ಕೊಂಡ್ ಹೋಕು? ನಿಂಗೇನ್ ನಾ ಈಗ ಅಷ್ಟ್ ಅರ್ಜಂಟ್ ಓಟಿಗೆ ಹೋಕುಂತ? ನೀವೂಗೆ ಓಟು ಇಲ್ಲೆಲಾ.. ಬೊಗುಳಾದೆ ನಡಿನಿ. ನಿಮ್ಮ ಕೆಲ್ಸ ನೋಡಿ.. ಹೋಗಿ.. ನೀವೂಗೆ ಇನ್ನ್ ಗೊತ್ತಿಲ್ಲೆ. ಶಾಲೆಗೆ ಹೋವ ಮಕ್ಕಳಿಗೆ ರಾಜಕೀಯ ಬೇಡ. ನಾವುಗೆ ನಿಮ್ಮಂಗೆ ಇರಿಕಾಕನ ಓಟು ತೇಳಿರೆ ಎಂತದ್ ತೇ ಗೊತ್ತಿತ್ಲೆ. ಆಗಿನ ಓಟು ತೇಳಿರೆ ಅಷ್ಟೆ ಗೌರವ ಇತ್ತ್. ಗ್ರಾಮ ಪಂಚ್ಯಾತ್ ಆಕೆ ಮುಂದೆ ಊರಿಗೆ ಪಟೇಲ್‌ರ್ ಇದ್ದೊ. ಊರ್‌ನ ಪಟೇಲ್ರ್ ತೇಳಿರೆ ಏನ್ ಗೌರವ. ಆಗ ಎಲ್ಲವರ ಮನೆಲಿ ಕುದ್ರಿಕೆ ಕುರ್ಸು ಕೂಡಾ ಇರ್ತಿತ್ಲೆ. ಊರ್‌ನ ಪಟೇಲ್ರ್ ಮನೆಗೆ ಬಂದವೆಂತ ಗೊತ್ತಾದ್ರೆ ಬೇರೆ ಮನೆಂದಾದ್ರ್ ಕುರ್ಸು ತಂದ್ ಅವುಕೆ ಕುದ್ರಿಕೆ ಕೊಡುವೊ. ಎಲ್ಲವು ಅವರೆದ್‌ರ್ ಕೈ ಕಟ್ಟಿ ನಿಂತ್ಕಂಡ್, ಇಲ್ಲರೆ ಅವರ ಮುಂದೆ ನೆಲಲಿ ಕುದ್‌ಕಂಡ್ ಅವು ಹೇಳುವ, ಮಾತ್‌ನ ಕೇಳ್ವೊ, ಪಟೇಲ್ರ ಡ್ರೆಸ್ ಕೂಡಾ ಹಾಂಗೆ ಇರ್ದು. ಬಿಳಿ ಕಚ್ಚೆ ಹಾಕಿ, ಅದರ ಮೇಲೆ ಬಿಳಿ ಕುಡ್ತ ಹಾಕಿ ಅದರ

ಮೇಲೆ ಕಪ್ಪು ಕೋಟ್ ಹಾಕಿ, ತಲೆಂಗೆ ನೆಹರೂನಾಂಗೆ ಬಿಳಿ ಇಲ್ಲರೆ ಕಪ್ಪು ಟೊಪ್ಪಿನ ಹಾಕಿ ಕೈಲಿ ಬೆತ್ತದ ದಂಡ್‌ನ ಕೊಡೆ ಹಿಡ್ಕಂಡ್ ಬಂದರೆ ಹೆಣ್ಮಕ್ಕ, ಮಕ್ಕ ಎಲ್ಲ ಹೆದರಿ ಕರೆಗೆ ತೆಲ್ಲುಗ್ವೊ. ಊರ್‍ಲಿ ನಡೆವ ನ್ಯಾಯ ಅನ್ಯಾಯಗಳ ಬಗ್ಗೆ ತೀರ್ಮಾನ ಕೊಟ್ಟರೆ ತಲೆ ಬಗ್ಗಿಸಿ ಪಾಲಿಸುವೊ.

ಈಗ ಗ್ರಾಮ ಪಂಚ್ಯಾತ್ ಬಂದ ಮೇಲೆ ಆ ಸ್ಥಾನಕ್ಕೆ ಮರ್‍ಯಾದೆ ಇಲ್ಲೆ. ಜಾತಿ ಆಧಾರಲಿ ಎಲ್ಲವೂ ಸಮಾನರ್‌ಂತ ಹೇಳುವ ಆದಾರ್‌ಲಿ ಗ್ರಾಮ ಪಂಚಾಯತ್‌ಗೆ ಕೂಡಾ ರಾಜಕೀಯ ಸೇರಿಟ್ಟು. ಹೆಣ್ಣ್ ಮಕ್ಕಾಂತ ಇಲ್ಲೆ, ಶಾಲೆಗೆ ಹೋಗದೊವುಂತ ಇಲ್ಲೆ, ಯಾರಿಗೂ ಬೇಕಾರ್‍ರೂ ಓಟಿಗೆ ನಿಲ್ಲಕ್. ಯಾರಿಗೂ ಕುರ್ಚಿಲಿ ಕುದ್ರಕ್.

ಅಲ್ಲ ಉಗ್ಗಪ್ಪ. ಸ್ವಾತಂತ್ರ್ಯ ಸಿಕ್ಕಿದ ಮೇಲೆ ಇದ್ ಪ್ರಜಾಪ್ರಭುತ್ವ ಅಲ್ಲನಾ? ಯಾರಿಗ್ ಬೇಕಾರ್‍ರೂ ಓಟಿಗೆ ನಿಲ್ಲಾಕಲ್ಲಾ? ಎಲ್ಲವುಕೆ ಸದಸ್ಯ ಆಕ್, ಅಧ್ಯಕ್ಷ ಆಕಲ್ಲಾ?

ನಿನ್ನ ತಲೆ ಪ್ರಜಾಪ್ರಭುತ್ವ. ಅದ್ಕೆ ಹೇಳ್ದ್. ನೀವು ಕಲ್ತದ್ ಜಾಸ್ತಿ ಆತ್‌ಂತ. ಯಾರಿಗೂ ಬೇಕಾರೂ ಕೊಡಲಿಯಾ? ಅದ್ರೆ ಅವ್ಕೆ ಊರ್‍ಲಿದ್ದ ನ್ಯಾಯನ ಉಳಿಸಿಕಂಕೆ ತಾಕತ್ತು ಉಟ್ಟಾಂತ ನೋಡಿಕಂಬಡಾ? ಒಂದು ಚೂರೂ ಓದಿಕೆ ಬರೆಕೆ ಬಾರದವಂಗೆ ಯಾವ ಶೋಕಿಗೆಯಾ. ಊರಿಗೆ ಪಟೇಲ ಆದು? ಎಲ್ಲಾ.. ಮಂಗಂಗೆ ಮಾಣಿಕ್ಯ ಕೊಟ್ಟಂಗೆ. ಕೊಡಲಿಯಾ.. ಕೊಡಲಿ. ಯಾರಿಗೆ ಬೇಕರೂ ಕೊಡಲಿ. ಅಂವ ಶಾಲೆಗೆ ಹೋಗುಟಾ? ಅಂವನ ಹಿಂದೆ ಮುಂದೆ ಹೇಂಗುಟ್ಟು. ಯೋಗ್ಯನಾ, ಅಯೋಗ್ಯನಾಂತ ತಿಳಿಬಡನಾ? ನೀವ್ಗೆ ಎಲ್ಲ ಕೆಲ್ಸ ಇಲ್ಲೆ. ಸರ್ಕಾರಲಿ ದುಡ್ಡು ಉಟ್ಟು, ಪಂಚಾಯತ್‌ಗೆ ಬಂದವ ಗೊತ್ತಿದ್ದರೆ ತಿಂದ್ ಕಾಂದೆ. ಗೊತ್ತಿಲ್ಲರೆ ಆಫೀಸರ್‍ಸ್‌ಗ ತಿಂದವೆ. ಊರಿಗೆ, ನಾವ್ಗೆ ಮೂರು ನಾಮ ಮಾತ್ರ.

ಎಲ್ಲವು ಹಾಂಗೇ ಅಲ್ಲಲ್ಲ ಉಗ್ಗಪ್ಪ? ಸಣ್ಣ ಪಿಳ್ಳಿನ ವಾದ.

ಎಲ್ಲವುಂತ ಯಾರ್ ಹೇಳ್ದೊ ತಲೆ ಹೋಕ? ಹಇರ್ ಶಾಲೆಗೆ ಹೋಗಿ, ಊರ್‍ನ ಜನಗಳ ಒಟ್ಟು ಸೇರ್‍ಸಿಕಂಡ್ ಸರ್ಕಾರಂದ ಸಿಕ್ಕಿದ ದುಡ್ಡುನ ಒಳ್ಳೆದಕ್ಕೆ ಖರ್ಚು ಮಾಡಿದ ಮಂಡೆ ಇರಂವನ ನೋಡಿ ಓಟು ಹಾಕೂಕುಂತ ಹೇಳ್ದ್.

ಅಂದರೆ ನೀವು ಓಟು ಹಾಕಿರೆಲ್ಲಾ? ದೊಡ್ಡ ಪಿಳ್ಳೆನ ಪ್ರಶ್ನೆ

ನಿಂಗೆ ಏನ್. ಯಾರ್‍ಯಾರ್ ದುಡ್ಡು ಮಿನಿ ಕೊಟ್ಟೊಳೊನಾ ಹೇಂಗೆ ಮಾರಾಯ? ನೀ ನನ್ನ ಬಾರೀ ಆಗಂದ ಒತ್ತಾಯ ಮಾಡಿಯ?

ಹಾಂಗಲ್ಲ ಉಗ್ಗಪ್ಪ.. ನಿಮ್ಮ ದೊಡ್ಡ ಮಂಞ, ನಿಮ್ಮ ಪಿಳ್ಳಿ ಓಟಿಗೆ ನಿತ್ತುಟಲ್ಲಾ ಹಾಂಗೆ ಹೇಳ್ದ್?!

ಓ ಹಾಂಗೆನಾ ನಿನ್ನ ಮಾಯಣಾ? ಹೋನೆ ಮಾರಾಯ ಹೋನೆ. ಅಂವ ಗೆದ್ದರೆ ಏನ್ ಬೇಕಾರೂ ಮಾಡ್ದು. ಹೋಗಿ ಒಂದು ಓಟು ಹಾಕಿ ಬನ್ನೆ. ಇದ್ ನನ್ನ ಲಾಸ್ಟ್‌ನ ಓಟು. ಇನ್ನ ಯಾರಿಗೂ ಓಟು ಹಾಕುದುಲೆ. ಹೇಳ್ದಾಂಗೆ ಅವನ ಗುರ್‍ತ್ ಎಂತದ್?

ಗುರ್‍ತ್‌ಂತ ಹೇಳಿರೆ ಎಂತದ್ ಉಗ್ಗಪ್ಪ? ಸಣ್ಣ ಪಿಳ್ಳೆ ಕೇಳ್ತ್.

ಗುರ್ತ್‌ಂತ ಹೇಳಿರೆ ಹೂನಾ? ಕೈನಾ, ಚರಕನಾ? ಎಂತಾದ್‌ಂತ?

ಓ ಅದಾ ಉಗ್ಗಪ್ಪ. ಅದ್ ಲೈಟ್, ಲಂಗ, ಬ್ಯಾಗ್, ರಿಕ್ಷಾ  ಎಲ್ಲ ಉಟ್ಟು.

ಎಂತ ಲೈಟ್, ಲಂಗ.. ಅಲ್ಲಾ.. ಇದರ್ಲೆ ಗೊತ್ತಾದೆ ಕಾಲ ಕೆಟ್ಟು ಹೋಗುಟುಂತ. ನೋಡು ನಾವು ಓಟು ಹಾಕಿಕನ ನೇಗಿಲ್ ಹೊತ್ತ ರೈತ, ದೀಪ, ಹೂ, ದನ, ಕರ್, ಚರಕ ಹೀಂಗೆ ಬಾರಿ ಒಳ್ಳೆ ಅರ್ಥ ಬರುವ ಚಿಹ್ನೆಗೆ ಇದ್ದೊ. ಈಗ ಎಂತ ಲೈಟ್, ಲಂಗ.. ರಿಕ್ಷಾ.. ಬ್ಯಾಗ್.. ಇದರ್ಲೆ ಗೊತ್ತಾದೆ ಮೊನ್ಸಂಗೆ ಗಿರ ಶುರು ಆಗುಟುಂತ. ರಾಜಕೀಯ ಇನ್ನ ಒಳ್ಳೆದಾದುಲೆ ಬುಡು. ದೇಶ ಲಗಾಡಿ ಹೋತ್. ದುಡ್ಡು ಮಾಡ್ದಂವ ದುಡ್ಡ್ ಮಾಡ್ತ್. ಇನ್ ಕಳ್ಕಂಡವ ಕಳ್ಕಾಂತ್. ಏನೇ ಆಗಲಿ ಈ ಸರ್ತಿ ಒಂದು ಓಟು ಹಾಕುದು ಹಾಕುದೆ.. ನನ್ನ ಪಿಳ್ಳಿ ಹಿಂಗೆಲ್ಲಾ ಮಾಡಿಕಿಲ್ಲೆಂತ ಧೈರ್ಯ ಉಟ್ಟು.

ಉಗ್ಗಪ್ಪ.... ಉಗ್ಗಪ್ಪ.... ನಮ್ಮ ಸಣ್ಣಣ್ಣ ಗೆದ್ದರೆ ಅಧ್ಯಕ್ಷ ಆಕೆ ಚಾನ್ಸು ಉಟ್ಟು. ನಿಮ್ಮ ಆಶೀರ್ವಾದ ಬೇಕಲ್ಲ ಉಗ್ಗಪ್ಪ. ದೊಡ್ಡ ಪಿಳ್ಳಿ ಗಾಳಿ ಹಾಕಿಕೆ ಶುರು ಮಾಡ್ತ್.

ನೀ ಒಮ್ಮೆ ಸುಮ್ಮನೆ ಕುದ್ರ್‌ಯ. ಅಧ್ಯಕ್ಷ ಗಿಧ್ಯಕ್ಷ ಆಕೆ ಮೇಲ್‌ನ ರಾಜಕೀಯದೊವು ಬುಡೊಕಲ್ಲಾ. ಏನಾರ್ ಹಿಕ್‌ಮತ್ ಮಾಡಿ ನಾಲ್ಕು ಜನಗಳ ಮುಂದೆ ಮಾತಾಡಿ ಆಗದಂವನ, ಸಭೆಯಲ್ಲಿ ಎದ್ದ್ ನಿತ್ತ್ ದೆರ್ಪುವರ ಅಧ್ಯಕ್ಷನಾಗುವಂಗೆ ಮಾಡುವೆ. ನಾ ಇಂದ್ ನಿನ್ನೆಯಿಂದ ನೋಡ್ದಲ್ಲ. ಮಂಡಲ ಪಂಚಾಯತ್ ಕಳ್ದ ಮೇಲೆ ಒಂದಾರ್ ನಮ್ಮಲ್ಲಿ ಸರಿ ನಡ್ದುಟ್ಟೋ? ನೀವ್ಗೆ ಗೊತ್ತಿಲ್ಲದವರೊಟ್ಟಿಗೆ ನಾ ಯಾಕೆ ಸಮ್ಮನೆ ಕಾಲಹರಣ ಮಾಡ್ದು?.

ಅಲ್ಲ ಉಗ್ಗಪ್ಪ. ಎಲ್ಲವುಕೆ ಅಧ್ಯಕ್ಷ ಅದು ಚಾನ್ಸ್ ಅಲ್ಲ?

ಚಾನ್ಸ್.. ಉಳ್ದವರ ಚಾನ್ಸ್‌ಯ.. ಅವು ರಬ್ಬರ್ ಸ್ಟಾಂಪ್‌ನಂಗೆ ಆಫೀಸರ್‌ಗ ಹೇಳ್ದಾಂಗೆ, ಹೇಳ್ದಲ್ಲಿಗೆ ಎಲ್ಲಾ ಹೆಬ್ಬೆಟ್ಟು ಒತ್ತುವೆ. ಅಧ್ಯಕ್ಷರ ಕರೆಲಿ ಕುದ್ರ್‌ಸಿ ಆಫೀಸರ್‌ಗ ನಡುಲೀ ಕುದ್ದ್ ಕಂಡ್ ಸಭೆ ನಡ್ಸುವೆ. ಹಾಗೆಂತಲಿ ನೋಡ. ಎಮ್ಮೆಲ್ಲಿಯೆ, ಎಂ.ಪಿ. ಸೀಟ್‌ಗ ಮುಖ್ಯಮಂತ್ರಿ, ಪ್ರಧಾನ ಮಂತ್ರಿನ ಎಲ್ಲಾ ಏನೂ ಗೊತ್ತಿಲ್ಲದ ಶಾಲೆಗೆ ಹೋಗದೊವ್ವೆ ಕೊಡಲಿ ನೋಡ. ಇದ್‌ಕ್ಕೆ ಹಿಕ್‌ಮತ್‌ಂತ ಹೇಳ್ದು. ಹಳ್ಳಿಲಿರುವ ಜನಂಗ ಎಷ್ಟು ಸಮಯದವರೆಗೆ ಮೂಡರಾಂಗೆ ಇದ್ದವೇನೋ ಅಷ್ಟ್ ಸಮಯದವರೆಗೆ ಮೇಲಿನೊವ್ವೆ ರಾಜಕೀಯ ಮಾಡಿಕೆ ಒಳ್ಳೆದ್. ಇಲ್ಲಿ ಸಲ್ಲದವ ರಾಜಕೀಯಕಕ್ಕೆ ಸಲ್ಲುದೂಂತ ಹೇಳ್ದು ಇದ್ದೇನೆ. ಅರ್ಥತಾ?.. ನೀ ಒಳ್ಳೆ ಓದಿದವ್ವೆ, ತಿಳುವಳಿಕೆ ಇರೋವ್ವೆ, ಅಧ್ಯಕ್ಷ ಸ್ಥಾನ ಸಿಕ್ಕುದೂಂತ ಕನಸು ಕಾಂಬೇಡ. ಕಳೆದ 50 ವರ್ಷಂದ ಸುಳ್ಯ ತಾಲೂಕಲಿ ಅನುಭವಿಸಿದ್ ಸಾಕ್. ಇನ್ನ ಗ್ರಾಮ ಪಂಚಾತಿಲಿ ಉದ್ದಾರಕೆ ಉಟ್ಟಾ...

ಉಗ್ಗಪ್ಪ ಉಗ್ಗಪ್ಪ ಅವ ಗೆದ್ದರೆ ನಮ್ಮ ರೋಡ್‌ಗೆ ಡಾಮರ್ ಹಾಕ್ಸಿದೆ ಗಡ. ಸಣ್ಣ ಪಿಳ್ಳೆಗೆ ಆಶೆ.

ಡಾಮರಾರ್ ಹಾಕ್ಸಲಿ. ಗುಡ್ಡೆನಾದ್ರ್ ಎಳ್ಸಲಿ ನಂಗೆ ಅದರ ಅಗತ್ಯ ಇಲ್ಲೆ. ಅದ್ ನಿಮ್ಮಂತ ಕಾರ್, ಬೈಕ್‌ಲಿ ಹೋಗೊವುಕೆ. ನಾ ನಡ್ಕಂಡಹೋದು, ನಡ್ಕಂಡ್‌ಬಾದು.

ಉಗ್ಗಪ್ಪ.... ಉಗ್ಗಪ್ಪ.... ನೀವು ಓಟಿಗೆ ಹೋಕನ ನಾವು ನಿಮ್ಮೊಟ್ಟಿಗೆ ಬರೋಕಾ? ಉಗ್ಗಪ್ಪಂಗೆ ಸಿಟ್ಟ್ ಬಂದ್ ಯಾಕಣ್ಣ? ಅಲ್ಲಿ ಹುಕ್ರಪ್ಪಣ್ಣನ ಅಂಗಡಿಂದ ಚಾಕಲೇಟ್ ಪೀಂಕಿಸಿಕಾ? ಬೇಡ. ಬೇಡ ಯಾರೂ ಬಾದು ಬೇಡ. ನಾ ಒಬ್ಬನೇ ಹೋಗಿ ಬಾವೆ... ಅಂದರೆ ನೀವು ಓಟ್ ಹಾಕಿರಲ್ಲಾ?.. ಎರಡು ಪಿಳ್ಳಿಗ ಒಟ್ಟಿಗೆ ಕೇಳ್ದೊ..



## ಚಾಂಪನ ಬಜನೆ

**ಕುಲ್ಲುಚನ ಕಾರ್ಯಪ್ಪ**

ಕತ್ತಲೆ ಹೊತ್ತಿಗೆ ನಮ್ ಚಾಂಪನ
ಬಜನೆ ಪೊರ್ಲ್ಲುನ ಕೆಮಿ ಕೊಟ್ಟು ಕೇಳೀ
ದೀಪದ ಮ್ಯಾಲೆ ವಿಭೂತಿ ಬರೆ ಎಳ್ದ್
ಕಣ್ಣ್‌ನ ಮುಚ್ಚಿ ಕಾಲ್‌ನ ಮಡ್‌ಚಿ
ರಾಗಕೆ ಸರಿ ಆಗಿ ತಾಳ ಹಾಕಂಡ್
ಕಾಯಿನ ಒಡ್ದ್ ಬಾಳೆಲಟ್ಟ್
ಹಣ್ಣ್‌ನ ಚೊಲ್ಲಿ ಒಟ್ಟಿಗೆ ಇಟ್ಟ್
ಚಾಂಪನ ಬಜನೆ ಸುರು ಆಗ್‌ತಿತ್ತ್

ಸುತ್ತ ಕುದ್ದ ಪಿಳ್ಳಕ ಗಿಳ್ಳಕ
ಒಬ್ಬನ ಒಬ್ಬ ಅಂಡ್‌ಸಿ ಅಂಡ್‌ಸಿ
ಕಿಸಕಿಸಿ. ಪಿಸಿಪಿಸಿ ಮಾಡ್‌ತ ಇದ್ದೊ
ಒಳಗೆ ಚಾಮೆವ್ವನ ಒಗ್ಗರಣೆ ಸದ್ದ್‌ಗೆ
ಜಾಂಪನ ಸದ್ದ್ ನಿತ್ತೇ ಹೋತ್
ಚಾಮೆವ್ವನ ಕರ್‌ದ್ ಕೆಮಿ ಹತ್ತ ಕೇಳ್ದೆ
ಯೇ ಗಂಗಾ ಕುಜ್ಜೆ ಗೈಪು ಆತಾ
ಚಾಮೆವ್ವ ಜವಾಬ್ ಹೇಳಕೆ ಮುಂದೆ
ಬಜನೆಗೆ ಮಂಗಳ ಹಾಡ್ಯಾತ್
ಅಡಿಗೆ ಮನೆಗೆ ನೆಟ್ಟನೆ ನುಗ್ಯಾತ್
ಮಣೆ ಮ್ಯಾಲೆ ಕುದ್ದೇ ಮುಕ್ಕಾಲ್ ಎಳ್ದ್
ಮುಕ್ಕಾಲ್ ತಲೆಗೆ ಅಡ್ಡಕೆ ಉದ್ದಕೆ
ತರಕಿಟ ತರಕಿಟ ತಟ್ಟ್‌ತ ಇದ್ದೊ.

# ನೆಂಪು...

ಪ್ರಜ್ವಲ್ ಬೊಳ್ತಾಜೆ

ಹೌದು ಸಣಪ, ಈಗ ಕಾಲ ತುಂಬಾ ಬದಲಾಗುಟು. ನಾ ಸಣ್ಣತರ್ಲಿ ಇರ್ಕನ ಇದ್ದಂತ ಖುಷಿ ಈಗ ಇಲ್ಲ. ಹಿಂದೆನ ಬದ್‌ಕ್ ಬೇರೆನೆ, ಈಗನ ಖುಷಿನ್ ಬೇರೆನೆ. ಅದೇನೆ ಇರ್ಲಿ ನಾವು ನಮ್ಮ ಚಿಕ್ಕ ಪ್ರಾಯಲಿ ಅನುಭವಿಸಿದ ಖುಷಿನ ನೆಂಪು ಮಾಡಿಕಣಮೊ.

ನಾ ಹುಟ್ಟಿ ನಂಗೆ ಬುದ್ದಿ ಬಾಕನ ಅಕ್ಕಿಗೆ ಇದ್ದ ರೇಟ್ ಬರೀ ಎಂಟಾಣೆ. ಈಗನ ಕತೆ ನೀವ್ಗೆ ಗೊತ್ತುಟು ಬುಡಿ. ಅದರ ನಾ ಹೇಳಿಕೆ ಹೋದುಲೆ. ಯಾಕತೇಳ್ರೆ ಇಂದ್‌ನ ಕಾಲನ್ ಬದಲಾಗುಟು ಕೋಲನೂ ಬದಲಾಗುಟು. ಹೌದು, ಹಿಂದೆ ನಾವು ಅನುಭವಿಸಿದ ಖುಷಿನ ಜೀವನನ ಪುನಃ ಅನುಭವಿಸೊಕುಂತ ಇದ್ದರೆ ಅದ್ ಗ್ಯಾರೆಂಟಿ ಸಿಕ್ಕಿಕಿಲೆ. ಅಮ್ಮನ ಪ್ರೀತಿ, ಅಪ್ಪನ ಪೆಟ್ಟ್ (ಒಮ್ಮೊಮ್ಮೆ ಮಾತ್ರ), ಅವ್ವ– ತಾತ ಮಾಡುವ ಮುದ್ದು, ಮಾವ–ಅತ್ತೆ, ಚಿಕ್ಕಪ್ಪ– ಚಿಕ್ಕಮ್ಮ ಪ್ರೀತಿಲಿ ಕೊಡುವ ನಾಕಾಣೆ, ಅಣ್ಣನೊಟ್ಟಿಗೆ–ಅಕ್ಕನೊಟ್ಟಿಗೆ ಮಾಡ್ದ ಜಗಳ... ಹೀಂಗೆ ಹೇಳಿಕಂಡ್ ಹೋದರೆ ಒಂದು ಪುಸ್ತಕನೆ ತುಂಬಿಬುಡ್ದು. ಆದರೂ ಅದೆಲ್ಲ ಇನ್ನ್ ನೆಂಪು ಮಾತ್ರ...

ಹಿಂದೆ ನಾವೊ ಬೊಳ್ತಾಗ್ ತಿದ್ದದೆ ಒಂದು ಖುಷಿಲಿ. ಕೊಟಗೆ ಹಿಂದೆ ಇದ್ದ ಬೀಜದ ಮರದ ಗೆಲ್ಲ್‌ನ ಕೊಡಿಂದ ಕಾವ ಹೂಂಜ ಕೂಂಗಿಕನ ಹೊರಗೆ ಜಗಲಲಿ ಮಲ್ಕಂಡಿದ್ದ ತಾತ "ಇಂದನೆ ಮಂಜ ಬೊಳ್ತಾತ್, ಎದ್ದ್ ಮೋರೆ ತೊಳ್ದ್ ಓದು. ಆಮೇಲೆ ಗದ್ದೆಗೆ ಹೋಗಿ ಎತ್ತ್ ಕಟ್ಟಿಕೆ ಉಟ್ಟು.." ಅಂತ ಹೇಳ್ತಿದ್ದ ಮಾತ್ ಈಗಲೂ ನಾವೊ ಕೇಳ್ದಂಗಾದೆ. ನಾವ್ಗೆ ಆಗ ಆ ಹೂಂಜನೆ ಅಲರಾಂ. ಹಿಂಗೆ ಎದ್ದ್ ಒಲೆ ಬುಡಕೆ ಹೋಗಿ ಒಂದು ಮಸಿ ತುಂಡು ತಕಂಡ್ ಹಲ್ಲು ಉಜ್ಜಿ ಮೋರೆ ತೊಳ್ದ್ ಬಾಕನ ಅಮ್ಮನ ಕರಿ ಕಾಪಿ ರೆಡಿ. ಅದರ ಕುಡ್ದ್ ಹನೀಸ್ ಓದಿ ಆಕನ ತಾತನ ಒಟ್ಟಿಗೆ ಗದ್ದೆಗೆ ಹೋವ ಟೈಮ್ ಆತಿತ್. ಹಂಗೆ ನಾ ಒಂದ್ ಎತ್ತ್‌ನ ತಾತ ಒಂದು ಎತ್ತ್‌ನ ಹಿಡ್ಕಂಡ್ ಗದ್ದೆ ಪುಣಿಲಿ ಹೊಡ್ಕಂಡ್ ಹೋಗಿ ಗದ್ದೆ ನಡುಲಿ ನಿಲ್ಸಿ ನೊಗನೇಗಿಲ್ ಕಟ್ಟ್‌ತಿದ್ದೊ. ಆಮೇಲೆ ತಾತನ ಹೂಟೆ ಶುರು. ಆಗ ಅವರ ರಾಗ ಕೇಳಿರೆ... ಅದ್ ನಮ್ಮ ಯಾವ ಸಂಗೀತ ನಿರ್ದೇಶಕರಿಗೂ ಆಕಿಲೆ. ಅಷ್ಟ್ ಚಂದದ ರಾಗ ಅದ್, ಇದರೆಲ್ಲ ಕೇಳಿಕಂಡ್ ನಾ ಗದ್ದೆ ಪುಣಿಲಿ ಕುದ್ದಿರ್ತಿದ್ದೆ.

ಆಗ ಅಪ್ಪ ಹೆಗಲ್‌ಲಿ ಒಂದು ಕೊಟ್ಟುನ ಇಸಿಕಂಡ್ ಬಂದ್ ಗದ್ದೆ

ಮಣಿನ ಕೆತ್ತಿಕೆ ಶುರು ಮಾಡ್ತಿದ್ದೊ. ಆಗ ನಂಗೆ ಸ್ಕೂಲ್‌ಗೆ ಹೋಕ್ಕೆ ಟೈಮ್ ಆತಿತ್. ಅಲ್ಲೆ ಗದ್ದೆ ಹಕ್ಕಲೆ ಇದ್ದ ತೋಡ್‌ಲಿ ಕೈಕಾಲ್ ಮೋರೆ ತೊಳ್ದ್ ಮನೆಗೆ ಬಂದ್ ಎರ್ಡ್ ರೊಟ್ಟಿನ ತಿಂದ್ ಅಲ್ಲೆ ಬೆಸೆಗೆ ಅಡಿಲಿ ಆರಿಕೆ ಹಾಕಿದ ಚೆಡ್ಡಿನ ತಕಂಡ್ ಗೋಡೆಗೆ ನಾಕ್ ಸರ್ತಿ ಪಟ ಪಟಂತ ಹೊಡ್ದ್ ಅದರ ಹೆಟ್ಟಿಕಂಬತ್ತಿದ್ದೆ. ಯಾಕೆತೇಳ್ರೆ ಆಗನ ಕಾಲಕ್ಕೆ ನಾವ್ಗೆ ಇದ್ದದೇ ಎರ್ಡ್ ಜೊತೆ ಚಡ್ಡಿ ಅಂಗಿ. ಒಂದು ಜೊತೆ ಜಾತ್ರೆ, ಮದುವೆ, ಬೊಜ್ಜಕೆಂತ; ಇನ್ನೊಂದು ದಿನಾ ಸಾಲೆಗೆ ಹಾಕಿಕೆ. ಅಂದರೆ ಇಡೀ ವರ್ಸಕೆ ಒಂದೇ ಜೊತೆ. ಅದ್ಕೆ ವಾರಕ್ಕೊಮ್ಮೆ ಒಂದು ಸೂಜಿ ನೂಲು ಬೇಕಾತಿತ್ತ್. ಆ ಬಟ್ಟೆ ಸರೀ ನೀರ್ ಕಾಂತಿದ್ದದ್ ಐತಾರ ಮಾತ್ರ ಈಗ ಇದೆಲ್ಲ ನಾವ್ಗೆ ನೆಂಪು ಮಾತ್ರ.

ಹೀಂಗೆ ಮೇಗಡೆ ಮನೆ ಪುಟ್ಟ ಹೈದ, ಆಚೆಕೆರೆ ಮೊಂಟಿ ಗೂಡೆ, ನಾವೆಲ್ಲವು ಸೇರಿಕಂಡ್ ಬೆದ್‌ರ್ ಗಾಡಿನ ಬುಟ್ಟ್‌ಕಂಡ್, ಪುಸ್ತಕನ ಒಂದು ಜೋಳಿಗೆಲಿ ಹಾಕಂಡ್, ಮಳೆಗೆ ಕಿರ್‌ಂಜೊಳು ಸೂಡಿಕಂಡ್ ಶಾಲೆಗೆ ಹೋತಿದ್ದೊ. ದಾರಿಲಿ ನಾವ್ ಆಡ್ತಿದ್ದ ಆಟ ಈಗನ ಮಕ್ಕಳ ಪ್ರವಾಸದಷ್ಟೇ ಮಜಾ ಕೊಡ್ತಾ ಇತ್ತ್. ಅದೇನೆ ಇರ್‍ಲಿ ಹಿಂಗೆ ಸಾಲೆಗೆ ಹೋಗಿ ನಾಕ್ ಅಕ್ಷರ ಕಲ್ತ್ ಮಾಸ್ತ್ರ ಕೈಲಿ ನಾಕ್ ಪೆಟ್ಟ್ ತಿಂದ್ ಬರ್‍ತಿದ್ದೊ. ಒಮ್ಮೊಮ್ಮೆ ಮಾಸ್ತ್ರ ಪೆಟ್ಟಿಗೆ ಚಡ್ಡಿ ಕೂಡ ಚಂಡಿ ಆದ ದಿನ ಉಟ್ಟು. ಆದರೂ ಸ್ಕೂಲ್‌ತೇಳ್ರೆ ಬಾರೀ ಖುಷಿ. ಮಧ್ಯಾಹ್ನದ ಊಟದ ಕತೆ ಬೇರೆನೆ. ಮನೆಂದ ಡಬ್ಬಾಲಿ ತಕಂಡೋದ ತಂಗಳನ್ನ ಮತ್ತು ಬಾಳೆಪೂಂಬೆ ಪಲ್ಯನೋ, ಚಿಬೇರಿ ಪಲ್ಯನೋ ಇರ್‍ತಿತ್. ಆಗನ ಕಾಲಕ್ಕೆ ನಾವ್ಗೆ ಅದುವೆ ಬಿರಿಯಾನಿ.

ಹೀಂಗೆ ಸಾಲೆ ಮುಗ್ದ್ ಮನೆಗೆ ಬಾಕನ ದಾರಿಕಾದ್‌ಕಂಡ್ ಐಮರಲಿ ಕುದ್ದಕಂಡಿದ್ದ ಅವ್ವ "ಮಂಜ, ಸಾಲೆಗೆ ಹೋಗಿ ಬಂದನಾ? ಇಂದ್ ಟೀಚರ್ ಎಂತ ಹೇಳಿಕೊಟ್ಟೊ..?" ಅಂತ ಕೇಳಿಕನ ನಾವು ಖುಷಿಲಿ ನಾಕ್ ಬಂಡಲ್ ಇಂಗ್ಲೀಷ್ ಬುಡ್ತಿದ್ದೊ. ಅದರ ಕೇಳಿ ಅವ್ವನ ಮೋರೆ ಪೊರ್ಲುಲಿ ಆರ್‌ತಿತ್ತ್. ಆಮೇಲೆ ಬೊಳ್ಬುದ್ ಎನಾರ್ ಒಳ್ದದ್ ಇದ್ದರೆ ತಿಂದ್ ಆಟದ ಬಾಣೆಗೆ ಅಡಿಕೆ ಇಲ್ಲರೆ ತೋಟಕ್ಕೆ ಅಡ್ಕೆ ಕಾಯಿ ಹೆರ್ಕಿಕೆ ಹೋತಿದ್ದೊ. ಆದರೆ ಈಗನ ಕಾಲದ ಮಕ್ಕಳಿಗೆ ಮನೆ ಮೆಟ್ಲ್ ಇಳಿಯಕೆ ಕಷ್ಟ ಆದೆ. ಮನೆ ಮೆಟ್ಲ್‌ಂದ ಸಾಲೆ ಮೆಟ್ಲ್‌ವರೆಗೆ ರಿಸ್ಸನೋ, ಜಿಪೋ ಆಕು.

ಅದೇನೆ ಇರ್‍ಲಿ ಹೀಂಗೆ ನಮ್ಮ ಬದ್‌ಕ್ ಸಾಗ್ತಾ ಇತ್ತ್. ಊರ್‍ಲಿ ಜಾತ್ರೆ ಬಂದರೆ ನಾವ್ಗೆ ಖುಷಿನೆ ಖುಷಿ. ಯಾಕೆತೇಳ್ರೆ ಅಕ್ಕ ಬಾವ, ಕೊಟ್ಟ ಗೂಡೆಗ ಎಲ್ಲೊವು ಆ ದಿನ ಮನೆಗೆ ಬರ್‍ತಿದ್ದೊ. ಮತ್ತೆ ಹೊಸ ಬಟ್ಟೆ ಹಾಕಿಕೆ ಒಂದು ಅವಕಾಶ ಸಿಕ್ತಾ ಇತ್ತ್. ದೇಸನದ ಜಾತ್ರೆ ಅಡ್ಕಕೆ ಹೋಗಿ ಸೋಜಿ ಕುಡ್ದ್ ದೇವ್ರಿಗೆ ನಾಕಾಣೆ ಹಾಕಿ ಪುರ್ಸದ ತಕಂಡ್ ಮನೆಗೆ ಬಾಕನ ತಾತ ರೆಡೀ ಆತಿದ್ದೊ. "ದೇಸನಕ್ಕೆ ಹೋಗಿ ಪುರ್ಸದ ತಂದೊಳನಾ ಮಂಜ..?" ಅಂತ ಕೇಳ್ತಿದ್ದ ಮಾತ್ ಈಗ ಕೂಡಾ ನಮ್ಮ ಕೆಬಿಗೆ ಬಿದ್ದಾಂಗಾದೆ. ಅಯ್ಯೋ.. ಸಣಪ ಇಂತ ನೆಂಪುಗಳ ಹೇಳಿಕಂಡ್ ಹೋದರೆ ಎಷ್ಟೋ ಉಟ್ಟು. ಏನೇ ಹೇಳಿ ಸಣಪ ಇದೆಲ್ಲಾ ನಾವ್ಗೆ ಇನ್ನ್ ನೆಂಪು ಮಾತ್ರ.......





# ಹಿಂಬೊತ್‌ನ ದಾರಿ

**ಮನೋಜ್ ಕುಡೆಕಲ್ಲ್**

ಹಾರ್ವ ಹಕ್ಕಿಗಳೇ
ಎಲ್ಲಿಗೆ ಹೊರ್ಟರಿ
ಹಿಂಬೋತ್ ಆಕನ।

ಕೆಂಪು ಅಗಸಲಿ ಕಾಣದ ಆಚೆಗೆ
ಮೊನ್ಸರೆ ಇಲ್ಲದ ಲೋಕನ ಹುಡ್ಕಿದ್
ತಪ್ಪಿದ ದಾರೀಲೂ ಮೊನ್ಸರ ವಾಸನೆ
ತಬ್ಬಲಿ ಆಬಡಿ ಚಂದದ ಭೂಮಿಲಿ

ಹಬ್ಬದ ಗೌಜಿಲಿ ಶಬ್ದದ ಅಬ್ಬರ
ನಿಮ್ಮ ಕೆಬಿಗಳಿಗೆ ತಡ್ಯಕೆ ತೀರ್ದನಾ
ಪಿಚ್ಚೆನ ಪೈರ್‌ಗೆ ಬುಟ್ಟೊಳ ಮೊದ್ದ್‌ನ
ತಿಂದರೆ ಕರ್ಳುಂದು ಮುರ್ಳುವ ಹೊಟ್ಟೆಗ

ಗರ್ಭಿಣಿ ಹಕ್ಕಿಗ ಕಟ್ಟಿದ ಗೂಡ್‌ಗ
ಮೊನ್ನೆದ್ ಕಂಡರೆ ನೋಡಿಕೆ ಇಂದಿಲ್ಲೆ
ಮೊಚ್ಚಿನ ಪೆಟ್ಟ್‌ಲಿ ಮರಕದ್ ಬುಡ ಇಲ್ಲೆ
ಬೊದ್ಕ್‌ವ ಬಯ್ಕ್‌ಗೆ ಕುದ್ರಿಕೆ ಸೂರಿಲ್ಲೆ

ಹಾರ್ವ ಹಕ್ಕಿಗಳೇ
ಎಲ್ಲಿಗೆ ಹೊರ್ಟರಿ
ಹಿಂಬೋತ್ ಆಕನ।



# ನೆನ್ಪುನ ಜೊಂಪೆ

ವಿನೋದ್

**ಕಣ್ಕೆಂಪು**

ಇದ್ ನಡ್ದದ್ ಸ್ವಾತಂತ್ರ್ಯಪೂರ್ವಲಿ. ಬಾಮಿ ತಾತ ಮನೆ ಬುಟ್ಟು ಕೆಲ್ಸ ಹುಡ್ಕಿಕಂಡ್ ಮೈಸೂರಿಗೆ ಬಂದಿತ್. ಅಲ್ಲಿ ಒಂದು ಸಣ್ಣ ಹೋಟ್ಲ್‌ಲಿ ಅಡಿಗೆ ಮಾಡಿಕಂಡ್ ಇತ್. ತಾತ ಆಗಲೇ ಅಡಿಗೆಲಿ ಹುಷಾರ್. ಹಿಂಗೆ ಸುಮಾರ್ ತಿಂಗ ಅಲ್ಲೇ ಕೆಲ್ಸ ಮಾಡಿಕಂಡ್ ಇತ್. ಆಗ ಎರಡನೇ ಮಹಾಯುದ್ಧದ ಸಮಯ. ಸೇನೆಗೆ ಆಯ್ಕೆ ನಡಿತಾ ಇತ್ತ್. ಯಾರಿಂದಲೋ ತಾತಂಗೆ ವಿಷಯ ಮುಟ್ಟಿತ್. ತಾತನು ಮತ್ತೆ ಇನ್ನೊಬ್ಬನೂ ಹೊರ್ಟೋ. ಅದಿದ್ದದ್ ಬೆಂಗ್ಳೂರ್‌ಲಿ.

ಇಬ್ಬರಿಗೂ ಊರು ಹೊಸದ್. ಈಗನಂಗೆ ಬೇಕಾಬಿಟ್ಟಿ ಬಸ್‌ಗ ಇತ್ಲೆ. ಕಡಿಮೆ ಖರ್ಚ್‌ಲಿ ಪೋಯಿ ತೇಳಿ ಟ್ರೈನ್ ಹತ್ತಿದೋ. ತಾತ ಟ್ರೈನ್‌ಲಿ ಇದೇ ಸುರುನ ಸಲ ಹೋಗ್ತಾ ಇರ್‍ದು. ತಾತಂಗೆ ಖುಷಿ ತಡಿಯಕೆ ಬೊತ್ತ್. ಬೆಂಗಳೂರ್ ಮುಟ್ಟ ಕಿಟಕಿಂದ ಹೊರಗೆ ನೋಡಿಕಂಡೇ ಕುದ್ದಿದ್ದೊ. ಮದ್ಯಾನಕ್ಕೆ ಬೆಂಗಳೂರ್ ತಲ್ಪಿ, ಆಯ್ಕೆಗೆ ಹೋದ್ದೊ. ಓಡ್‌ದು ಹಾರ್‍ದು ಎಲ್ಲ ನಮ್ಮ ಹಳ್ಳಿಯವ್ಕೆ ಹೇಳಿಕೊಡೊಕ. ಎಲ್ಲ ಸುತ್ತುನ ತಾತ ಆರಾಮ್ ಲಿ ಮುಗ್ಸಿದೋ.

ತಾತಂಗೆ ಖುಷಿನೋ ಖುಷಿ ಸೇನೆಗೆ ಸೇರ್‍ತಾ ಒಳೆ ತಾ. ಕಡೇದಾಗಿ ವೈದ್ಯಕೀಯ ಪರೀಕ್ಷೆ ಒಂದು ಬಾಕಿ ಇತ್ತ್. ಅಲ್ಲಿ ಸ ಎಲ್ಲ ಸರಿ ಹೋತ್. ಆದರೆ ತಾತನ ಕಣ್ಣುನ ನೋಡಿ ಡಾಕ್ಟರ್ 'ಯಾಕೋ ಕಣ್ಣ್ ಕೆಂಪು ಉಟ್ಟಲಾ, ಕಳ್ಳು ಮನಿ ಕುಡ್ದ್ ಬಂದೊಳ್ರ'ತ ಹೇಳ್ತ್. ತಾತಂಗೆ ಕಳ್ಳು ಕುಡಿಯೋ ಅಭ್ಯಾಸನೂ ಇಲ್ಲೆ. ಮತ್ತೆಂತ ಇರ್‍ದು ತ ತಾತ ಗ್ಯಾನ ಮಾಡಿಕಂಡ್ ನಿಂತತ್.

ಆಗ ಗೊತ್ತಾತ್ ಶುರುನ ಸಲ ಟ್ರೈನ್‌ಲಿ ಬಂದದ್ ಅದೇ ಖುಷಿಲಿ ಹೊರಗೆ ತಲೆ ಹಾಕಿ ಕುದ್ದಿತ್. ಮುಂದಿನ ಇಂಜಿನ್ ಬಂದ ಹೊಗೆಗೆ ಕಣ್ಣು ಕೆಂಪಾದ್‌ತ. ಅದನ್ನೇ ತಾತ ಡಾಕ್ಟರ್‌ಗೆ ಹೇಳ್ತ್. ಡಾಕ್ಟರ್ ಯಾಕೋ ಓರೆ ಕಣ್ಣ್‌ಲಿ ನೋಡಿ 'ಸರಿ ಸರಿ ನಾಳೆ ಇನ್ನೊಮ್ಮೆ

ಬನ್ನಿ ಕಮ್ಮಿ ಆದರೆ ಮುಂದಕೆ ಕಳ್ಸಿನೆ'ತ ಹೇಳ್ತ್.

ತಾತ ಏನೂ ಮಾತಾಡದೆ ಹೊರಗೆ ಬಾತ್. ಬೆಂಗಳೂರಿಗೆ ಬಂದದ್ ಇದೇ ಶುರು, ಕೈಲಿ ಕಾಸ್ಸ ಇಲ್ಲೆ, ಉಳ್ಕಣಿಕೆ ಗೊತ್ತಿರವು ಯಾರೂ ಇಲ್ಲೆ. ಪುನಃ ಹೋಗಿ ಬಾದು ತಮಾಷೆ ಆಟ. ತಾತಂಗೆ ತಲೆ ಕೆಟ್ಟ್ ಹೋತ್. ಕಡೆಗೆ ಸಾಯಲಿತ ಗ್ಯಾನ ಮಾಡಿ ವಾಪಸ್ ಹೊರ್ಟತ್. ಅಂದೇನಾದ್ರು ತಾತ ಅಲ್ಲೇ ಇದ್ದಿದ್ದರೆ, ಇಲ್ಲೆ ಕಣ್ಣ್ ಕೆಂಪು ಆಗದೆ ಹೋಗಿದ್ದರೆ.

ತಾತ ಎರಡನೇ ಮಹಾಯುದ್ಧಲಿ ಭಾಗವಹಿಸಿ ಇಂದ್ ಮಾಜಿ ಸೈನಿಕತ ಹೆಮ್ಮೆಲಿ ಇರ್ತಾ ಇದ್ದೊ. ಅದ್ಕೇ ಹೇಳ್ದು ಎಲ್ಲಾ ಹಣೆಲಿ ಬರ್ದಿರಕುಂತಾ.

**ಗಸಗಸೆ**

ನಾನ್ ಹೈಸ್ಕೂಲಿ ಇರ್ಕನ ನಡ್ದ ಕತೆ ಇದ್. ಊರಿಂದ 2 ಕಿ.ಮೀ ದೂರಲಿ ಸೈಂಟ್ ಮೇರೀಸ್‌ಂತ ಒಂದು ಸಣ್ಣ ಆಸ್ಪತ್ರೆ ಉಟ್ಟು. ಅದ್ ಮುಖ್ಯ ರಸ್ತೆಂದ 400ಮೀ ಒಳಗೆ ಇತ್ತ್. ಆಸ್ಪತ್ರೆವರೆಗೆ ಎರಡೂ ಬದಿಲಿ ಗಸೆಗಸೆ ಮರನ ನೆಟ್ಟಿದ್ದೋ.

ನಮ್ಗೆಲ್ಲಾ ಅಲ್ಲಿಮುಟ್ಟ ಸೈಕಲ್ ಹೊಡ್ಕಂಡ್ ಹೋಗಿ ಹಣ್ಣುಗಳ್ನ ಕೊಯ್ದು ತಿಂದ್ಕಂಡ್ ಬಾದು ಮಾಮೂಲು. ವಾರಕ್ಕೆ ಒಮ್ಮೆಯಾದ್ರು ಹೋಗಿ ಬರ್ತಾ ಇದ್ದೋ. ಹಿಂಗೆ ಒಂದು ಭಾನುವಾರ ಕ್ರಿಕೆಟ್ ಆಡಿ ನಾವು 6 ಜನ ಮೂರು ಸೈಕಲ್‌ಲಿ ಹೊರ್ಟೊ. ಅಲ್ಲಿ ತಲ್ಪಿ ಸೈಕಲ್‌ನ ಮರದ ಬುಡಲಿ ನಿಲ್ಸಿ ಹಣ್ಣುಗಳ್ನ ಕುಯ್ಯಕೆ ಶುರು ಮಾಡ್ದೊ. ಜೇಬು ತುಂಬವಷ್ಟ್ ಹಣ್ಣುಗಳ್ನ ಕುಯ್ದೊ. ಅಂದ್ ನಮ್ಮೊಟ್ಟಿಗೆ ಆದರ್ಶ್ ತೇಳಂವ ಬಂದಿತ್. ಅದೇ ಶುರು ಅಂವ ಬಂದದ್ ಮತ್ತೆ ಅವಂಗೆ ಆ ಹಣ್ಣುಗ ಅಷ್ಟ್ ಇಷ್ಟ ಸ ಇತ್ಲೆ. ಆದರೂ ನಮ್ಮೊಟ್ಟಿಗೆ ಜಿದ್ದಿಗೆ ಜೇಬು ತೊಬಿಸಿಕಂಡಿತ್.

ಹಂಗೆ ಅದ್ ಇದ್ ಮಾತಾಡಿಕಂಡ್ ಹೊರಗೆ ಬಂದ್ ತಲ್ಪಿದೋ. ಅಲ್ಲಿ ಯಾರೋ ವಯಸ್ಸಾದುವು ಆಸ್ಪತ್ರೆ ಕಡೆ ಬರ್ತಾ ಇದ್ದೊ. ಬಂದವು ನಮ್ಮನ ಒಳಗೆ ಡಾಕ್ಟರ್ ಒಳನ ತ ಕೇಳ್ದೊ. ಹಣ್ಣ್ ಕುಯ್ಯೋ ಭರಲಿ ನಾವು ಅದನ್ನ ಗಮನಿಸಿತ್ಲೆ, ಯಾವುದಕ್ಕೂ ನಮ್ಮ ಹೈದ ನಿಮ್ಮೊಟ್ಟಿಗೆ ಬಂದದೆ ತೇಳಿ ರಘು ಮತ್ತೆ ವಾಸುನ ಅವರೊಟ್ಟಿಗೆ ಹೋಗಿ ಬಾಕೆ ಹೇಳಿ ನಾವು ಗೇಟ್ ಹತ್ರನೇ ನಿಂತಿದ್ದೋ ಹಣ್ಣ್ ತಿಂತಾ.

ಆಗ ಆದರ್ಶ್ ಮಾಡಿಕೆ ಕೆಲ್ಸ ಇಲ್ಲದೆ ದಾರಿಲಿ ಹೋಗ್ತಾ ಬರ್ತಾ ಇದ್ದ ಗಾಡಿಗಳ ಚಕ್ರಕ್ಕೆ ಹಣ್ಣುಗಳ ಬಿಸಾಡ್ತಾ ಇತ್ತ್.

"ಏ ನೀ ತಿಂಬಲೆ ತೇಳ್ರೆ ನಮ್ಗಾರ್ ಕೊಡು ನಾವು ತಿಂದವೆ" ತಾ ಹೇಳ್ದೊ.

"ನಾ ಕಿತ್ತದ್, ನಾ ಏನಾರ್ ಮಾಡ್ಕನೆ ನೀವ್ಗೆ ಯಾಕೆ" ತೇಳ್ತ್.

ಇನ್ನ್ಯಾಕೆ ಮಾತ್‌ತ ನಾವು ಸುಮ್ಮನೆ ಕದ್ದೋ

ಅಷ್ಟೊತ್ತಿಗೆ ಕೆಳಗೆಂದ ಒಂದು ಲಾರಿ ಹಂಗೆ ಮೇಲೆಂದ ಒಂದು ಬೈಕ್ ಬರ್ತಾ ಇತ್. ಇಂವ ಜೇಬ್‌ಂದ ಒಂದು ಮುಂಡಿ ಹಣ್ಣುಗಳ್ನ ತೆಗ್ದ್ ಬೈಕ್ ಚಕ್ರಕ್ಕೆ ಬಿಸಾಡ್ತ್.

ಅದ್ ಹೋಗಿ ಬೈಕ್ ಚೈನ್‌ಗೆ ಸಿಕ್ಕಿಹಾಕಿಕಣಕ. ಅವಂಗೆ ಬ್ಯಾಲೆನ್ಸ್ ಸಿಕ್ಕದೆ ಆ ಕಡೆ ಈ ಕಡೆ ಆಗಿ ಹೋಗಿ ಮುಂದೆ ನಿಲ್ಸಿತ್. ಸ್ವಲ್ಪ ತಪ್ಪಿದರೂ ಅಂವ ಲಾರಿ ಅಡಿಲಿ ಸಿಕ್ಕಿ ಪಜ್ಜಿ ಆಗ್ತಾ ಇತ್.

ಯಾವುದೋ ಗ್ಯಾನಲಿ ನಾ ಎಲ್ಲೋ ನೋಡ್ತಾ ಕುದ್ದಿದ್ದೆ. ಅವನ ಬೈಗುಳ ಕೇಳಿ ಆ ಕಡೆ ತಿರ್ಗಿನೆ ಕೈಲಿ ಒಂದು ದೊಣ್ಣೆ ಹಿಡ್ಕಂಡ್ ನಮ್ಮತ್ತ ಓಡಿ ಬರ್ತಾ ಉಟ್ಟು. ಈ ಕಡೆ ತಿರ್ಗಿನೆ ಇಲ್ಲಿ ಇದ್ದವು ಮಾಯ. ಹಿಂದೆ ಇದ್ದ ಮಾವಿನ ತೋಟದ ಒಳಗೆ ಓಡುವೆ. ನಾನ್ ಸೈಕಲ್ನ ತಿರ್ಗ್ಸಿ ತೋಟದ ಒಳಗೆ ಓಟ ಕಿತ್ತೆ.

ಬೈಕ್ ಅವಂಗೆ ಅವನ ಹೊಟ್ಟೆ ಎತ್ತಿಕಂಡ್ ಅಲ್ಲಿ ಮುಟ್ಟ ಓಡಿಬಂದೇ ಸಾಕಾಗಿ ಹೋತ್. ಏದುಸಿರ್ ಬುಡ್ತಾ ನಿಂತ್ ಕಂಡ್ "ಲೋಫರ್‌ಗಳ ನಿಮ್ಗೆ ಸಾಯ್ಸಿಕೆ ನಾನೆ ಸಿಕ್ಕಿದ. ಬೇರೆ ಯಾರು ಇಲ್ಲೆನ? ಸಾಲೆ ಮಕ್ಕ ಮಾಡೋ ಕೆಲ್ಸನ ಇದ್"

ಹಂಗೆ ಹಿಂಗೆ ತಾ ಸುಮಾರ್ ಶಾಪ ಹಾಕಿತ್. ನಾವು ಸುಮ್ಮನೆ ನಿಂತ್ಕಂಡ್ ಕಣ್ಣ್ ಪಿಳಿಪಿಳಿ ಬುಡ್ಕಂಡ್ ನೋಡ್ತಾ ಇದ್ದೊ. ಅವಂಗೆ ಸಾಕಾಗಿ ಬೈಕಿ ಹತ್ತಿ ಹೋತ್.

ಸ್ವಲ್ಪ ಹೊತ್ತು ಅಲ್ಲೆ ನಿಂತ್ ಅಂವ ಹೋತಾ ತ ನೋಡಿ ಮೆಲ್ಲೆ ಏನು ಆಗದವರಂಗೆ ದಾರಿಲಿ ಬಂದು ನಿಂತೊ. ಒಳಗೆ ಹೋಗಿದ್ದವುಸ ಬಂದೋ. ಸದ್ದಿಲ್ಲದೆ ಊರ್ ಕಡೆ ಸೈಕಲ್ ಮೆಟ್ಟಿಕಂಡ್ ಹೋದೊ.

**ಕಣ್ಣುಗ**

ನಂಬಿರೆ ನಂಬಿ ಬುಟ್ಟರೆ ಬುಡಿ. ಆದರೆ ನಾ ಹೇಳ್ದು ಮಾತ್ರ ಸತ್ಯ. ಇದು ಯಾವ್ದೋ ಕಾಲ್ಪನಿಕ ಕತೆ ಅಲ್ಲ. ಕಂಡದ್ದು, ಕೇಳಿದ್ದು, ಅನುಭವಿಸಿದ್. ನಾ ಡಿಗ್ರಿಲಿ ಇರ್ಕನ ಆದ ಘಟನೆ. ಕಡೆಯ ಪರೀಕ್ಷೆ ಮುಗ್ಸಿ ತಾತನ ಮನೆಗೆ ಹೊರ್ಟೆ. ಬಸ್ಸ್ ಇಲ್ದ್ 3 ಕಿ.ಮೀ ನಡೆಯಕು. ಬೆಳದಿಂಗಳ ಸಂಜೆ ಅದ್. ಹೆಂಗೊ ತಲ್ಪಕನ ಕತ್ತಲಾದತ ಗೊತ್ತಿತ್. ಮೆಲ್ಲೆ ಮೆಲ್ಲೆ ನಡ್ದ್ ಮನೆ ತಲ್ಪಿದೆ. ತಾತ ಅವ್ವಂಗೆ ಪಿಳ್ಳೆನ ಕಂಡ್ ಖುಷಿ ಆತ್. ಊಟ ಮುಗ್ಸಿ ಬಂದೋ.

ಕತೆ ಮುಂದುವರ್ಸಿಕೆ ಮುಂದೆ ನೀವ್ಗೆ ಮನೆಯ ನೀಲಿನಕ್ಷೆ ಕೊಟ್ಟನೆ. ಮನೆ ಮೆಟ್ಟಿಲ್ ಹತ್ತಿದಂಗೆ ಸಣ್ಣ ಕೈಮರ. ಅಲ್ಲಿಂದ ದೇವರ ಕೋಂಬರೆ, ಊಟದ ಮನೆ, ಅಡಿಗೆ ಮನೆ. ಕೈಮರ ಎಡಕ್ಕೆ ಒಂದು ಮಲಗುವ ಕೋಂಬರೆ, ಅದು ನನ್ನ ಕೋಂಬರೆ ದೇವರ ಬಲಕ್ಕೆ ತಾತ ಅವ್ವ ಮಲಗುವ ಕೋಂಬರೆ. ತಾತ ಅವ್ವ ಮಲಗುವ ಕೋಂಬರೆಲಿ ಕಿಟಕಿ ಉಟ್ಟು ಅಲ್ಲಿಂದ ಕೈ ಮರಕ್ಕಾಗಿ ಅಂಗಳ ಕಂಡದೆ. ಕೈಮರ ಬಲಕ್ಕೆ ಅಟ್ಟಕ್ಕೆ ಹೋಕೆ ಮೆಟ್ಟಿಲ್ ಅದರ ಕೆಳಗೆ ಸಣ್ಣ ಕೋಂಬರೆ, ಅಲ್ಲಿ ಕೆಲ್ಸದ ರಾಜು ಮತ್ತೆ ಅವನ ಸಂಸಾರ ಇತ್. ಅರ್ತ ಆಗದಿದ್ದರೆ ಇನ್ನೊಮ್ಮೆ ಓದಿ ನೋಡಿ.

ಈಗ ಕತೆಗ ಬಾನೊ ಊಟ ಮುಗ್ಸಿ ನನ್ನ ಕೋಂಬರೆಲಿ ಟಿವಿ ನೋಡ್ತಾ ಇದ್ದೊ. ಸ್ವಲ್ಪ ಹೊತ್ತ್‌ಲಿ ಮೆಲ್ಲೆ ನಿದ್ದೆ ಹತ್ತಿತ್. ತಾತ ಅವ್ವ ಅವರ ಕೋಂಬರೆಗೆ ಹೋದೊ.

ನಂಗೆ ಮೆಲ್ಲೆ ನಿದ್ದೆ ಹತ್ತಿದಂಗೆ ಏನೋ ಕನ್ಸ್ ಶುರು ಆತ್. ಯಾವ್ದೋ ಕಣ್ಣುಗ ನನ್ನೇ ನೋಡ್ತಿರಂಗೆ. ಆಗ ನನ್ನ ಮನ್ಸ್‌ಲೆ ಪ್ರಶ್ನೆಗ ಶುರು ಆತ್. ಏ ಇದ್ಯಾವ ಕಣ್ಣಪ್ಪ ನನ್ನ ನೋಡ್ತಾ ಇರ್ದು. ಅದ್ ಯಾವ್ದೋ ಹೆಣ್ಣಿನ ಕಣ್ಣ್. ತಟ್ ತಾ ಎಚ್ಚರ ಆತ್. ಬಾಗಿಲ್ ಕಡೆ ನೋಡ್ದೆ. ಯಾಕೊ ಹೆದ್ರಿಕೆ ಆತ್. ಯಾಕೆ ಹಿಂಗೆ ಅನ್ಸಿತ್. ಯಾರ ಕಣ್ಣ್ ಅದ್. ಸುತ್ತ ಮುತ್ತ ಯಾವ ಮನೆ ಸ ಇಲ್ಲೆ. ಯಾರು ಬಾಲೆ ಅಂತದ್ರಲಿ? ಛೆ? ಯಾಕೆ ಇಂತ ಕನ್ಸ್.

ಹಿಂಗೆ ಗ್ಯಾನ ಮಾಡ್ಕಂಡಿರ್ಕನ ತಾತ ಮೆಲ್ಲೆ ಕೋಂಬರೆಗೆ ಬಂದೊ. ಬಂದವೇ "ನೀ ಏನಾರ್ ಏಣಿ ಕಾಲ್ ಕಡೆ ಹೋದನಾಂತಾ ಕೇಳ್ದೊ.

"ಇಲ್ಲೆ ಅಲ. ನಾ ಆಗಳೆಂದ ಇಲ್ಲೇ ಒಳೆ ತಾತ. ಯಾಕೆ ಏನಾತ್?"

"ಅಲ್ಲ ನಾ ಹಂಗೆ ಕಿಟಕಿ ಕಡೆ ಮುಖ ಹಾಕಿ ಮಲ್ಗಿದ್ದೆ, ಯಾರೋ ಈ ಕಡೆಂದ ಆಚೆ ಹೋದಂಗೆ ಆತ್. ನಾ ಎಲ್ಲೋ ನೀನೆ ಹೋಗಿರ್ವ ತಾ ಬಂದೆ". ತಾತ ಹಿಂಗೆ ಹೇಳ್ಕನ ನನ್ನ ಎದೆ ಒಮ್ಮೆ ಝುಲ್ ತೇಳ್ತ್. ನಂಗೆ ಕಣ್ಣುಗ ಕಂಡಿದ್ರೆ ಕನ್ಸ್‌ಲಿ ಕಂಡತ್ ಆದೆ ತಾತಂಗೆ ಯಾರೋ ಹೋದಂಗೆ ಹೆಂಗೆ ಅನ್ಸಿತ್. ಅಂದರೆ ನಾ ಕಣ್ಣ್ ಕಂಡತ್ ತ ಬಾಗಿಲ್ ಕಡೆ ನೋಡ್ದೆ, ಆಗ ಅಲ್ಲಿ ಇದ್ದವ್ ಅಲ್ಲಿಂದ ಓಡಿ ಹೋದ್ದೋ ಅದನ್ನ ತಾತ ನೋಡ್ದೋ.

ಆದರೆ ಈಗ ಇರ್ವ ಪ್ರಶ್ನೆ, ಅದ್ ಯಾರ್ ತ?

ಆ ಒಂದ್ ಮನೆಗೆ ಹಗಲೇ ಯಾರು ಬಾಲೆ ಅಂತರ್ದಲಿ ಈ ರಾತ್ರಿ ಅದೂ ಈ ತರ. ಕೆಲ್ಸದವ್ ಬಂದ್ ಹೋದ್ರೂ ಅವರ ಕೋಂಬರೆ ಬಾಗಿಲ್ ಸದ್ದ್ ಕೇಳ್ದೆ. ಅವೂ ಅಲ್ಲ.

ನಂಗೆ ಅಷ್ಟಿಷ್ಟ್ ಹೆದ್ರಿಕೆ ಆತ್ಲೆ. ಸುಮ್ಮನೆ ಎದ್ದ್ ಹೋಗಿ ತಾತನ ಕೋಂಬರೆಲಿ ಮಲ್ಗಿದೆ.

ಅಂದರೆ ಇಂದಿಗೂ ಸ ಆ ಕಣ್ಣುಗ ಯಾರ್ದುಂತೇಳ್ದು ನನ್ನಲ್ಲಿ ಪ್ರಶ್ನೆ ಆಗೆ ಉಳ್ದುಟ್ಟು.



## ದೈವಕೆ ತಪ್ಪಿತ್ ಕೋಳಿ

ಮಿಲನ್ ಎಂ.

ನನ್ನೆದೆಲಿ ಬೀಸುತುಟ್ಟು ಪ್ರೀತಿಯ ಗಾಳಿ
ಹೇಳಿಕಂಡೆ 'ಸರಿಕಟ್ಟಾದ್ರೆ ಮನೆದೈವಕ್ಕೊಂದು ಕೋಳಿ'
ಗೂಡೆ ಯಾರೂತಾ ಹೇಳ್ನೆ ಕೇಳಿ...
ಅವಳೇ ನನ್ನ ಅತ್ತೆ ಮಗಳು...
ನನ್ನ ಹೃದಯ ಕದ್ದ ಕಳ್ಳಿ.

ಗೂಡೆ ಮಾತ್ರ ಬೆಳ್ಳುಳ್ಳಿನಂಗೆ ಬಿಳಿ...
ಅದಕ್ಕೆ ನಾ ಹಾಕ್ತಾ ಇದ್ದೆ ಡೈಲಿ Fair and lovely
ಅತ್ತೆನೆದುರು ಮಾವ ಹಲ್ಲುದುರ್ದ ಹುಲಿ
ಮಾವನಲ್ಲಿಗೆ ಹೋಕನ ಕೇಪುನ ಬೆಡಿ ಇತ್ತ್ ಕೈಲಿ
ಅತ್ತೆ ಕೊಟ್ಟ ಚಾ ಕುಡ್ದ್‌ಕಂಡ್ ತಿಂದೆ ಒಂದೆರ್ಡ್ ಚಕ್ಕುಲಿ
ಗೂಡೆ ಕೊತ್ತಿನ ಹಿಡ್‌ಕಂಡ್ ನಾಚಿಕೆಲಿ ನಿಂತ್‌ಕಂಡಿತ್ ಜಗಲಿಲಿ.

ಮಾವ, ನಾ, ಬಾವ, ಕುದ್ದ ಒಂದೇ ಮೇಜು
ಬಿಲಿಗೂಡೆ ಬಳಸಿದ್ದಂಗೆ ತಿಂದೆ ಪುಂಡಿ ಊರು ಕೋಳಿ
ಕಟ್ಟದ ಕೋಳಿ ಆಗಾಗ ಕೂಗಿದ್ದಂಗೆ ಆತ್ ನನ್ನ ಹೊಟ್ಟೆಲಿ.
ಪುಂಡಿ ಓಡ್ತಾ ಇತ್ ಹಲ್ಲಿಲ್ಲದ ಮಾವನ ಬಾಯಿಲಿ
ಬಾವ ಊಟ ಮಾಡಿಕಂಡ್ ಮೆಸೆಜ್ ಒತ್ತ್ತ ಇತ್ ಎಡಕೈಲಿ

ಪುಂಡಿತಿಂದ ಮನೇಲಿ ಗುಂಡಿ ತೆಗಿಬಡಂತ ಹೇಳಿದ್ದ ಅಪ್ಪ
ನಾ ಮಗಳ ನೋಡ್ ಕಾಕನ ಮಾವನ ಮುಖ ಆತಿತ್ ಕಾದ ಕಲ್ತಪ್ಪ
ಕರೆಂಟ್ ಹೋಕನ ಕೈಲಿ ಹಿಡ್ಕಂಡ್ ಬಾತ್ ಚಿಮಿಣಿ ದೀಪ
ಹೇಳ್ತ್ 'ವಿಷಯ ಅಪ್ಪನೊಟ್ಟಿಗೆ ಕೇಳದಿದ್ದರೆ ನಾ ನಿಮ್ಮೊಟ್ಟಿಗೆ ಕೋಪ',
ಇದರ ನೋಡ್ದ ಸಣ್ಣ ಬಾವ ನೆಗಾಡಿಕಂಡ್ ಹೇಳ್ತ್
'ಅಯ್ಯೋ ಬಾವ ಪಾಪ'

ನನ್ನ ಕಥೆ ಗೊತ್ತಾತ್ ಮನೇಲಿ
ಅಪ್ಪನ ಕೈಗೆ ಬಾತ್ ಸೌದೆ ಕೊಳ್ಳಿ
ಸರಿ ಬಾದುಲೆಗಡ ನಮ್ಮಿಬ್ಬರ ಬಳಿ
ಅಜ್ಜ ಹೇಳ್ದ ನೀ ಕಟ್ಟಿರೆ ತಾಳಿ
ನಾವೆಲ್ಲ ತಕಂಡವೆ ಚೊಪ್ಪುನ ಬಳ್ಳಿ
ಅಜ್ಜ ಕುಡ್ದಿದ್ದೋ ಒಂದು ಕುಪ್ಪಿ ಚಾಳಿ ಕಳಿ
ಅಂತೂ ಇಂತೂ ಒಪ್ಪಿತ್ಲೆ ಮನೇಲಿ
ಮನೆದೈವಕ್ಕೆ ತಪ್ಪಿತ್ ಹೇಳಿಕಂಡ ಕೋಳಿ

●



# ನಾಟಿ ವೈದ್ಯ

ಯೋಗೀಶ್ ಹೊಸೊಳಿಕೆ

**ಕಣ್ಣಿಗೆ ಗಾಯ, ಉರಿ:**

ಕಣ್ಣ್ ಮನಸಿನ ಕನ್ನಡಿ. ಇದ್ ಅತ್ಯಂತ ಸೂಕ್ಷ್ಮ ಅಂಗ. ತೊಳೆವಾಗ ಶುದ್ಧ, ತಂಪು ನೀರಿನಿಂದ ತೊಳೆದುಕೊಂಡು ಶುಭ್ರವಾಗಿಟ್ಟುಕೊಳ್ಳಬೇಕು. ಕಣ್ಣಿಗೆ ಕಸ, ಧೂಳು ತುಂಬಿಕೊಂಡರೆ ಕೈಗಳಿಂದ ಉಜ್ಜಿಕೊಳ್ಳಬಾರದು ಏಕೆಂದರೆ ಆ ಕಸ ಕಣ್ಣಿಗೆ ಗಾಯ ಮಾಡಬಹುದು. ದೂರದರ್ಶನ ನೋಡುವಾಗ ಅಂತರ ಕಾಯ್ದುಕೊಂಡು, ಗಣಕಯಂತ್ರದ ಮುಂದೆ ಕೆಲಸ ಮಾಡುವಾಗ, ಪ್ರಯಾಣದ ವೇಳೆ ಕನ್ನಡಕ ಬಳಸುವುದು ಸೂಕ್ತ.

ಕಣ್ಣಿಗೆ ಸಣ್ಣ ಗಾಯವಾದಲ್ಲಿ ತಾಯಿಯ ಹಾಲಿನಲ್ಲಿ ಒಂದು ಕಾಳು ಮೆಣಸನ್ನು ನಾಲ್ಕು ಸಲ ಅರೆದು (ಹುಡಿ ಮಾಡದಂತೆ) ಕಣ್ಣಿಗೆ ಬಿಡಬೇಕು. ಮೆಣಸಿನ ಕಸ ಕಣ್ಣಿಗೆ ಹೋಗದ ಹಾಗೆ ಜಾಗ್ರತೆ ವಹಿಸಿಕೊಳ್ಳಬೇಕು. ಒಮ್ಮೆ ಹೆಚ್ಚು ಉರಿತ ಕಂಡರೂ ಗುಣ ಮುಖ ಹೊಂದುತ್ತದೆ. ತಂಪಿಗೆ ಉರಿಗೆ ಹಸಿ ಕೊತ್ತಂಬರಿ ಬೀಜವನ್ನು ರಾತ್ರಿ ಹೊತ್ತು ಹತ್ತು ಕಾಳನ್ನು ಬಿಳಿ ಬಟ್ಟೆಯಲ್ಲಿ ಕಟ್ಟಿ ಸ್ವಲ್ಪ ನೀರಿನಲ್ಲಿ ನೆನೆ ಹಾಕಿ ಬೆಳಿಗೆ ಆ ನೀರನ್ನು ಕಣ್ಣಿಗೆ ಬಿಡಬೇಕು.

ಕಾಡಿನಲ್ಲಿ ಬಳ್ಳಿಯ ರೀತಿಯಲ್ಲಿ ಮರದಿಂದ ಮರಕ್ಕೆ ಇಲ್ಲ ನೆಲದಲ್ಲಿ ಉದ್ದವಾಗಿ ಮಾದುರ್ ಬಳ್ಳಿ ಅಥವಾ ಇಂಜಿರ್ ಬಳ್ಳಿ ಬೆಳೆಯುತ್ತದೆ. ಇದನ್ನು ಬುಟ್ಟಿ ಹೆಣೆಯುತ್ತಾರೆ. ಇದನ್ನು ಕಡಿದಾಗ ಬರುವ ನೀರನ್ನು ಕಣ್ಣಿಗೆ ಬೀಡುತ್ತಿದ್ದರೆ ತಂಪಾಗಿರುತ್ತದೆ.

ನರಿ ಕಬ್ಬು (ನಾಯಿ ಕಬ್ಬು) ನೀರಾವರಿ ಪ್ರದೇಶಗಳಲ್ಲಿ ಹೆಚ್ಚಾಗಿ ಗುಂಪಾಗಿ ಬೆಳೆಯುವ ಗಿಡಗಳು ಈ ಗಿಡದ 4 ಗಂಟನ್ನು ಬೆಂಕಿಯಲ್ಲಿ ಹಾಕಿ ಬಿಸಿ ಮಾಡಿಕೊಂಡು ಸ್ವಚ್ಚಗೊಳಿಸಿ ಬಟ್ಟೆಯಲ್ಲಿಟ್ಟು ಜಜ್ಜಿದಾಗ

ಬರುವ ಶುದ್ಧ ರಸವನ್ನು ಕಣ್ಣಿಗೆ ಬಿಡಬೇಕು. ಸಣ್ಣ ಪುಟ್ಟ ಕಸಗಳಿದ್ದಲ್ಲಿ ಹೋಗಿ ಶುದ್ಧವಾಗುತ್ತದೆ. 2 ಹನಿಯಂತೆ 2 ಹೊತ್ತು ಸಾಕು.

ಎದೆ ಹಾಲನ್ನು ಕಣ್ಣಿಗೆ ಹಾಕುವುದರಿಂದ ಉರಿ, ನೋವು ನಾಶವಾಗುತ್ತದೆ.

ಕುಂಬಳಕಾಯಿ ಸಿಪ್ಪೆಯನ್ನು ಒಣಗಿಸಿ ಪುಡಿಮಾಡಿ ಕೊಬ್ಬರಿ ಎಣ್ಣೆಯಲ್ಲಿ ಬೆರೆಸಿಡಬೇಕು. ಈ ಎಣ್ಣೆಯನ್ನು ತಲೆಗೆ ಹಚ್ಚಿಕೊಂಡರೆ ಕಣ್ಣುರಿ ಕಡಿಮೆಯಾಗುತ್ತದೆ.

ಯಾವುದೇ ರೀತಿಯ ತರಕಾರಿ ಹಚ್ಚಿದಾಗಲು (ರಸ ಇರುವ) ರಸವನ್ನು ಮುಖ ಹಚ್ಚಿಕೊಳ್ಳಬಹುದು ಹಾಗೆಯೇ ಕಣ್ಣಿನ ಭಾಗಕ್ಕೆ ಹಚ್ಚುವುದರಿಂದ ಶಾಂತವಾಗುತ್ತದೆ.

**ಪೊನ್ನೆ ಮರ** ಇದರಲ್ಲಿ ಸಣ್ಣ ಸಣ್ಣ ಕಾಯಿಗಳಾಗುತ್ತದೆ. ಇದರ ಎಲೆಗಳನ್ನು ಶುದ್ಧ ನೀರಿನಲ್ಲಿ ಚೆನ್ನಾಗಿ ಹುಡಿ ಮಾಡಿದಾಗ ಎಲೆಯ ರಸ ಬಿಟ್ಟ ನೀರು ಬಿಳಿ ಬಣ್ಣಕ್ಕೆ ತಿರುಗುತ್ತದೆ. ಈ ನೀರಿನಲ್ಲಿ ಕಣ್ಣು ನೋವಿನವರು, ಕೆಂಗಣ್ಣಿನವರು ತೊಳೆದುಕೊಳ್ಳವುದು ಒಳ್ಳೆಯದು. ಕೆಂಗಣ್ಣು ಇದ್ದವರು ಶುದ್ಧ ತೆಂಗಿನ ಎಣ್ಣೆ ಬಿಡುತ್ತಿದ್ದ ಬಿಸಿಲಿಗೆ ಹೋಗದೆ ಇದ್ದಲ್ಲಿ ಗುಣ ಹೊಂದಬಹುದು.

**ಕೆಸರು ಹುಣ್ಣು**

ಮಳೆಗಾಲದಲ್ಲಿ ತೋಟ, ಗುಡ್ಡೆಗಳಲ್ಲಿ ಕೆಲಸ ಮಾಡುವವರು ಕಾಲು ಬೆರಳು ಮಧ್ಯ ಹೆಚ್ಚಾಗಿ ಕಂಡು ಬರುತ್ತದೆ. ಮಣ್ಣು ಮರಳು ಮಿಶ್ರಣ ಕಾಲಿನ ಭಾಗವನ್ನು ಕೊರೆಯುತ್ತದೆ. ತುಂಬಾ ಹೆಚ್ಚಾದಾಗ ತುಂಬಾ ನೋವು ಕಾಣಿಸಿಕೊಳ್ಳುತ್ತದೆ.

ಕಾಚುಪುಳಿ (ಕಹಿಹುಳಿ)ಯ ರಸ ಮತ್ತು ಅರಶಿನ ಹುಡಿಯನ್ನು ಸೇರಿಸಿ ರಾತ್ರಿ ಮಲಗುವ ಮುನ್ನ ಕಾಲುಗಳನ್ನು ಉಗುರು ಬೆಚ್ಚಗಿನ ನೀರಿಗೆ ಅರಶಿನ ಹುಡಿ ಹಾಕಿದ ನೀರಿನಲ್ಲಿ ಕಾಲು ತೊಳೆದುಕೊಂಡು ಒಣಗಿದ ನಂತರ ಮೇಲಿನ ಮಿಶ್ರಣ ಹಚ್ಚಿ ಮಲಗುವುದು ಉತ್ತಮ.

ರಾತ್ರಿ ಮಲಗುವ 1 ಗಂಟೆ ಮೊದಲು ಕಾಲುಗಳನ್ನು ಒಣಗಿಸಿಕೊಂಡು ಶುದ್ಧ ಎಳ್ಳೆಣ್ಣೆಯನ್ನು ಚೆನ್ನಾಗಿ ಹಚ್ಚುತಿದ್ದರೆ ಹುಣ್ಣು ಗುಣವಾಗುತ್ತದೆ. ಇಂಜಿರ್ ಕೊಡಿ ಮತ್ತು ಮದರಂಗಿಯನ್ನು ಚೆನ್ನಾಗಿ ಜಜ್ಜಿಕೊಂಡು ಕಾಲಿನ ಪಾದ ಬೆರಳುಗಳ ಸುತ್ತ ಹಚ್ಚುವುದರಿಂದ ಬಣ್ಣದಿಂದ ಅಲಂಕಾರದೊಂದಿಗೆ ಕೆಸರು ಹುಣ್ಣು ಕಡಿಮೆಯಾಗುತ್ತದೆ. ಈ ಮದ್ದನ್ನು ಯಾರೂ ಯಾವಾಗ ಬೇಕಾದರೂ ಹಚ್ಚಬಹುದು.

**ನಿದ್ದೆ**

ಶುದ್ಧ ತೆಂಗಿನ ಎಣ್ಣೆಗೆ ಹಸಿ ಮೆಂತೆಯನ್ನು ಚೆನ್ನಾಗಿ ಜಜ್ಜಿ ಹುಡಿಮಾಡಿ ಹಾಕಬೇಕು. 2 ದಿನಗಳಲ್ಲಿ ಮೆಂತೆಯ ಅಂಶ ಎಣ್ಣೆಗೆ ಬರುತ್ತದೆ. ನಂತರ ಬಹಳ ದಿನಗಳವರೆಗೆ ಹಾಗೇ ಇಟ್ಟುಕೊಂಡು ತಲೆಗೆ ಹಚ್ಚುವುದರಿಂದ ರಾತ್ರಿ ನಿದ್ದೆ ಬರುತ್ತದೆ. ಕೂದಲು ಸೊಂಪಾಗಿ ಬೆಳೆಯುತ್ತದೆ. ಒಳ್ಳೆಯ ಸುವಾಸನೆಯನ್ನು ಹೊರ ಸೂಸುತ್ತದೆ.

ಕುದೋಟಿ (ಹಡುಚ್ಚೆ) ಈ ಗಿಡವನ್ನು ಬೇರು ಸಮೇತ ಕಿತ್ತು ಸ್ವಚ್ಛಗೊಳಿಸಿ ಚೆನ್ನಾಗಿ ಜಜ್ಜಿ ತಲೆಗೆ ಲೇಪ ಹಾಕಬೇಕು. ಹೀಗೆ 3–4 ದಿನ ಹಾಕಿ 2 ಗಂಟೆಗಳ ನಂತರ ತೊಳೆದುಕೊಂಡರೆ ತಲೆ ತಿರುಗುವುದು ನಿಲ್ಲುತ್ತದೆ. ನಿದ್ದೆ ಚೆನ್ನಾಗಿ ಬರುತ್ತದೆ. ಹೆಚ್ಚು ತಂಪಿನ ಗುಣವನ್ನು ಈ ಗಿಡ ಹೊಂದಿದೆ.

**ಮುಳ್ಳು ಚುಚ್ಚಿದರೆ**

ಪದಗಳಿಗೆ ತೋಟದಲ್ಲಿ ಕೆಲಸ ಮಾಡುವಾಗ ಮುಳ್ಳು ಚುಚ್ಚಿ ಕಾಲುಗಳಲ್ಲಿಯೇ ಉಳಿದು ನೋವು ಪ್ರಾರಂಭವಾಗುತ್ತದೆ. ಆ ಭಾಗವನ್ನು ಸ್ವಲ್ಪ ಬಿಡಿಸಿ ಕಾಡಿನಲ್ಲಿ ತೋಟಗಳಲ್ಲಿ ಸಿಗುವ ಕಾಡುಕೆಸದ ದಂಟನ್ನು ಜಜ್ಜಿ ಆ ಭಾಗಕ್ಕೆ ಬಟ್ಟೆಯಲ್ಲಿ ಕಟ್ಟಬೇಕು. ಕಾಡುಕೆಸ ಹಿಂಡಾಗಿ ಬೆಳೆಯುತ್ತದೆ.

**ಬಿಳಿ ಕೂದಲು**

ಇತ್ತೀಚಿನ ದಿನಗಳಲ್ಲಿ ಸಣ್ಣ ಮಕ್ಕಳ ತಲೆಯಲ್ಲಿ ಒಂದೊಂದು ಬೆಳ್ಳಗಿನ ಕೂದಲನ್ನು ಕಾಣುತ್ತೇವೆ. ಇದಕ್ಕೆ ಬಿಳಿ ದಾಸವಾಳದ ಹೂಗಳನ್ನು ಗೋಮೂತ್ರದಲ್ಲಿ ಅರೆದು ತಲೆಗೆ ಹಚ್ಚುತ್ತಾ ಬಂದಲ್ಲಿ ಕ್ರಮೇಣ ಕೂದಲು ಕಪ್ಪು ಬಣ್ಣಕ್ಕೆ ತಿರುಗುತ್ತದೆ.

ಮದುರಂಗಿ ಗಿಡದ ಎಲೆಗಳನ್ನು ಚೆನ್ನಾಗಿ ಜಜ್ಜಿ ರಾತ್ರಿ ತಲೆಗೆ ಹಚ್ಚಿಕೊಂಡು ಮರುದಿನ ಬೆಳಿಗೆ ತಲೆ ತೊಳೆದುಕೊಳ್ಳುತ್ತಿದ್ದರೆ ಬಿಳಿಯ ಕೂದಲು ಕೆಂಚಿ ಬಣ್ಣಕ್ಕೆ ತಿರುಗುತ್ತದೆ.

**ಕೂದಲು ಬೆಳವಣಿಗೆ**

ಸಣ್ಣ ಸಣ್ಣ ಮಕ್ಕಳ ತಲೆಯಲ್ಲಿ ಖಾಲಿ ಇರುತ್ತದೆ. ಇದಕ್ಕೆ ಬೆಳ್ಳುಳ್ಳಿಯನ್ನು ನಿಂಬೆ ರಸದಲ್ಲಿ ಅರೆದು ಖಾಲಿ ಜಾಗಕ್ಕೆ ಹಚ್ಚುತ್ತಾ ಬರಬೇಕು. ಇದು ಮಕ್ಕಳಿಗೆ ಮಾತ್ರವಲ್ಲ ದೊಡ್ಡವರು ಮಾಡಬಹುದು. ನಾಲ್ಕೈದು ದಿನಗಳಲ್ಲಿ ಫಲ ದೊರಕುತ್ತದೆಯೆಂದಲ್ಲ ತುಂಬಾ ದಿನ ಮಾಡುತ್ತಾ ಬಂದಲ್ಲಿ ಫಲ ನಿರೀಕ್ಷಿಸಬಹುದು.

**ಮುಖದ ಕೂದಲು**

ಈ ಸಮಸ್ಯೆ ಹೆಚ್ಚಾಗಿ ಹೆಣ್ಣು ಮಕ್ಕಳಲ್ಲಿ ಕಂಡು ಬರುತ್ತದೆ. ಮುಖದ ಕೆಲವು ಕಡೆ ಮೀಸೆ ಬಂದ ಹಾಗೇ ಕೂದಲು ಬೆಳೆಯುತ್ತದೆ. ಇದರಿಂದ ಕಿರಿ ಕಿರಿ ಅನುಭವಿಸುವವರು ಹೆಣ್ಣು ಮಕ್ಕಳು ಇದಕ್ಕೆ ತೆಂಗಿನ ಕಾಯಿಯ ಅರ್ಧ ಭಾಗವನ್ನು ಹಾಲು ಮಾಡಿಕೊಂಡು ಆ ಹಾಲಿಗೆ ತೊಗರಿ ಬೇಳೆ ಒಂದು ಹಿಡಿ ಹಾಕಿಕೊಂಡು ಮೂರು ದಿನ ಹಾಗೇ ಬಿಟ್ಟು ಬಿಡುವುದು. ನಂತರ ಚೆನ್ನಾಗಿ ಆ ಕಾಳುಗಳನ್ನು ಒಣಗಿಸಿ ಹುಡಿ ಮಾಡಿಕೊಂಡು ಎಲ್ಲಿ ಎಲ್ಲಿ ಬೇಡವಾದ ಕೂದಲು ಬೆಳೆಯುತ್ತದೆ ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ಈ ಹುಡಿ ಹಾಕಿ ಉಜ್ಜಬೇಕು. ಕ್ರಮೇಣ ಕೂದಲು ಮಾಯವಾಗುತ್ತದೆ.

**ಭೇದಿ**

ಒಬ್ಬ ವ್ಯಕ್ತಿಗೆ ದಿನದಲ್ಲಿ ಎರಡಕ್ಕಿಂತ ಹೆಚ್ಚು ಬಾರಿ ಮಲವಿಸರ್ಜನೆಗೆ ಭೇದಿ ಎನ್ನುತ್ತಾರೆ. ಇದು ಬೇರೆ ಬೇರೆ ಖಾಯಿಲೆಗಳ ಸೂಚನೆಗಳು ಇರಬಹುದು ಅಥವಾ ತಿಂದ ತಿನಿಸಿನಲ್ಲಿ ಅತೀಯಾಗಿ ಉಷ್ಣವಾಗಿ ಜೀರ್ಣಗೊಳ್ಳದೆ ಭೇದಿ ವಾಂತಿ ಕಾಣಿಸಿಕೊಳ್ಳುತ್ತದೆ.

ಈ ಸಮಯ ಶರೀರಕ್ಕೆ ನೀರಿನ ಅಗತ್ಯವಿದ್ದು ಆಗಾಗ ನೀರು ಕುಡಿಯಬೇಕು. ಸಣ್ಣ ಮಕ್ಕಳಲ್ಲಿ ಭೇದಿ, ವಾಂತಿ ಕಾಣಿಸಿಕೊಂಡರೆ ತಿನ್ನುವ ಆಹಾರ ಅಥವಾ ತಾಯಿಯ ಆಹಾರದಿಂದ ಎದೆ ಹಾಲಿನ ಮೂಲಕ ಮಗುವಿನ ಮೇಲಿನ ಲಕ್ಷಣ ಕಂಡು ಬರಬಹುದು. ಈ ಸಮಯ ಗಟ್ಟಿ ಆಹಾರ ತಿನ್ನಬಾರದು.

ಒಂದು ಲೋಟ ನೀರಿಗೆ ಎರಡು ಚಮಚ ಚಾ ಹುಡಿ ಹಾಕಿ ಹಾಲು ರಹಿತ ಕುದಿಸಿ ಕಣ್ಣಚಾಯ ಮಾಡಿ 4 ಸಲ ಕುಡಿಯಬೇಕು. ಸಕ್ಕರೆ ಉಪಯೋಗಬೇಡ. ಭೇದಿ ಕಡಿಮೆಯಾಗುತ್ತದೆ.

ಎರಡು ಚಮಚ ಜೀರಿಗೆಯನ್ನು ಪಾತ್ರೆಯಲ್ಲಿ ಚೆನ್ನಾಗಿ ಹುರಿಯಬೇಕು. ಅದು ಕಪ್ಪು ಬಣ್ಣಕ್ಕೆ ಬಂದಾಗ ಒಂದು ಚಮಚ ಸಕ್ಕರೆ ಹಾಕಿ ಚೆನ್ನಾಗಿ ಹುರಿಯಬೇಕು. ನಂತರ ಒಂದು ಲೋಟ ನೀರು ಹಾಕಬೇಕು. ನೀರು ಚೆನ್ನಾಗಿ ಕುದಿದಾಗ ಕಷಾಯ ತಯಾರಾಗುತ್ತದೆ. ಈ ಕಷಾಯವನ್ನು ಮೂರು ಹೊತ್ತು ಕುಡಿಯುವುದರಿಂದ ಭೇದಿ ಕಡಿಮೆಯಾಗುತ್ತದೆ.

ಹೊಟ್ಟೆ ನೋವಿನಿಂದ ಕೂಡಿದ ಭೇದಿಯನ್ನು ಗುಣ ಪಡಿಸಲು ನೆಲ್ಲಿಂಡಿ ಪರಿಣಾಮಕಾರಿ ತಯಾರಿಸುವ ವಿಧಾನ ನೆಲ್ಲಿಕಾಯಿಯನ್ನು ಮಣ್ಣಿನ ಪಾತ್ರೆಯಲ್ಲಿ ಉಪ್ಪಿನೊಂದಿಗೆ ಕೆಲವು ದಿನಗಳ ಕಾಲ ಬಿಡಬೇಕು. ಬಳಿಕ ಆ ನೆಲ್ಲಿಕಾಯಿಯನ್ನು ಕೈಯಲ್ಲಿ ಹಿಚುಕಿದಾಗ ಅದರ ಬೀಜ ಬೇರೆಯಾಗುತ್ತದೆ. ಕೆಲವು ದಿನಗಳವರೆಗೆ ಹಿಚುಕುತ್ತಾ ಇದ್ದರೆ ಒಂದು ಲೇಹವಾಗುತ್ತದೆ. ಇದರಲ್ಲಿ ಉಪ್ಪಿನ ಅಂಶವನ್ನು ಇರುವುದರಿಂದ ವರ್ಷ ಗಟ್ಟಲೆ ಹಾಳಾಗುವುದಿಲ್ಲ. ಈ ಲೇಹವನ್ನು ಮಜ್ಜಿಗೆಯೊಂದಿಗೆ ಸೇವಿಸುವುದು ಉತ್ತಮ.

ದಾಳಿಂಬೆ ಹಣ್ಣಿನ ಹೊರಗಿನ ದಪ್ಪ ಸಿಪ್ಪೆಯನ್ನು ಒಣಗಿಸಿ ಇಟ್ಟುಕೊಂಡಿರಬೇಕು. ಇದರ ಎರಡು ತುಂಡನ್ನು 2 ಲೋಟ ನೀರಿಗೆ ಹಾಕಿ ಕುದಿಸಬೇಕು., ರಸ ಬಿಟ್ಟ ನಂತರ ಎರಡು ಹೊತ್ತು ಅರ್ಧ ಲೋಟದಂತೆ ಕುಡಿಯಬೇಕು.

**ರಕ್ತ ಶುದ್ಧೀಕರಣ**

ಕೆಲವರ ರಕ್ತ ಜಿಡ್ಡಿನ ಅಂಶ ಕಂಡು ಬರುತ್ತದೆ. ಮೂತ್ರ ಕೆಂಪು ಬಣ್ಣಕ್ಕೆ ಬರುತ್ತದೆ. (ಉಷ್ಣದಿಂದಲೂ ಮೂತ್ರ ಕೆಂಪಾಗುತ್ತದೆ) ಇದಕ್ಕೆ ಉದುರಿ ಬಳ್ಳಿ ಎನ್ನುವ ಸಣ್ಣ ಸಣ್ಣ ಎಲೆಗಳಿಂದ ಕೂಡಿದ ಸುಂದರವಾದ ಕಣುವ ಬಳ್ಳಿ ಇದರ ಬೇರುಗಳು ಮಾಲೆ

ಮಾಲೆಗಳಾಗಿರುತ್ತದೆ. ಈ ನಾಲ್ಕು ತುಂಡನ್ನು ಗಂಜಿಯಲ್ಲಿ ಹಾಕಿ ಬೇಯಿಸಿ 4 ದಿನ ಬೆಳಿಗ್ಗೆ ಊಟ ಮಾಡುವುದರಿಂದ ರಕ್ತದಲ್ಲಿನ ಜಿಡ್ಡಿನ ಅಂಶ ನಾಶವಾಗಿ ಶುದ್ಧಗೊಳಿಸುತ್ತದೆ.

**ಕಾಲಿನಲ್ಲಿ ಆಣಿ**

ಎಕ್ಕಮಲೆ ಗಿಡದ ಚಿಗುರನ್ನು ತುಂಡುದಾಗ ಅದರಿಂದ ಬಿಳಿ ಹಾಲಿನಂತಹ ದ್ರವ ಹೊರ ಬರುತ್ತದೆ. ಇದನ್ನು ಆಣಿಗೆ ಲೇಪನ ಮಾಡಬೇಕು ಹೀಗೆ ಹಲವು ಬಾರಿ ಬಿಡದೆ ಮಾಡಿದ್ದಾಗ ಆಣಿ ಹೊರ ಬರುತ್ತದೆ. ಈ ಗಿಡದಲ್ಲಿ ನೀಲಿ ಬಣ್ಣದ ಹೂ ಬಿಡುತ್ತದೆ.

**ಬಿಳಿ ಸೆರಗು**

ಪಾಷಾಣ ಭೇದಿ ಎಂಬ ಸಣ್ಣ ಸಣ್ಣ ಎಲೆಗಳಿಂದ ಕೂಡಿದ ಬಿಳಿ ಹೂವಿನಿಂದ ತುಂಬಿರುವ ಸಣ್ಣ ಜಾತಿಯ ಸಸ್ಯ ಇದರ ಎಲೆ ಹೂ ಸಮೇತ ಊರು ಹಸುವಿನ ಹಾಲಿನಲ್ಲಿ ಕಡೆದು ಬೆಳಿಗ್ಗೆ ಖಾಲಿ ಹೊಟ್ಟೆಗೆ 12 ದಿನ ಕುಡಿಯಬೇಕು.

ಉಪ್ಪಳಿಕೆ ಮರದ ಕೆತ್ತೆಯನ್ನು ಕಷಾಯ ಮಾಡಿ 2 ಲೋಟ ನೀರಿಗೆ ಕೆತ್ತೆಯನ್ನು ಹಾಕಿ ಅರ್ಧ ಲೋಟ ಆಗುವವರೆಗೆ ಕುದಿಸಬೇಕು. ಹೀಗೆ 15 ದಿನ ಬೆಳಿಗ್ಗೆ ಖಾಲಿ ಹೊಟ್ಟೆಗೆ ತೆಗೆದುಕೊಳ್ಳುವುದು.

ಬಿಳಿ ಸೆರಗು (ಕೆಂಪು ಸೆರಗು) ಎನ್ನುವಂತ ಹೆಂಗಸರಿಗೆ ಮಾತ್ರ ಬರುವಂತಹದು ಎನ್ನುವ ತಪ್ಪುಕಲ್ಪನೆ ಹಲವು ಜನರಲ್ಲಿದೆ. ಇದು ಗಂಡಸರಿಗೂ ಬರುತ್ತದೆ. ನಾವು ಒಂದು ಖಾಲಿ ಬಾಟಲಿಯಲ್ಲಿ ರಾತ್ರಿ ಮೂತ್ರ ಮಾಡಿ ಇಟ್ಟಲ್ಲಿ ಮರುದಿನ ಅದರ ಕೆಳಭಾಗ ಗಮನಿಸಿದರೆ ಬಿಳಿ ಬಣ್ಣದ ಸಣ್ಣ ಸಣ್ಣ ಕಣಗಳು ಕಂಡು ಬರುತ್ತವೆ. ಇದು ಕ್ರಮೇಣ ದೊಡ್ಡ ಸಮಸ್ಯೆಯನ್ನು ಸೃಷ್ಟಿಸಬಲ್ಲದು. ಆದ್ದರಿಂದ ಪ್ರಾರಂಭದಲ್ಲಿ ಪತ್ತೆ ಹಚ್ಚಿ ಗುಣ ಪಡಿಸಿಕೊಳ್ಳುವುದು ಉತ್ತಮ.

**ಕೆಂಪು ಸೆರಗು**

ಕೆಂಪು ತೆಂಗಿನ ಕಾಯಿ "ಕೆಂದಾಳೆ" ಅಂದರೆ ಉಳಿದ ತೆಂಗಿನ ಕಾಯಿಗಿಂತ ಬಣ್ಣದಲ್ಲಿ ಕೆಂಪಾಗಿರುತ್ತದೆ. ಅಪರೂಪವಾಗಿ ಅಲಂಕಾರಕ್ಕೆ ಎಂಬಂತೆ ಕೆಲವರು ಮನೆಯ ಎದುರಿನಲ್ಲಿ ನೆಟ್ಟಿರುತ್ತಾರೆ. ಈ ತೆಂಗಿನ ಮರದ ಹಿಂಗಾರವನ್ನು ಒಂದು ಹಿಡಿಯನ್ನು ನಾಡಿ ಹಸುವಿನ ಹಾಲಿನಲ್ಲಿ ಅರೆದು ಖಾಲಿ ಹೊಟ್ಟೆಗೆ ಒಂದು ಲೋಟದಂತೆ ಮೂರು ದಿನ ಕುಡಿಯುವುದು ಮುಟ್ಟಿನ ಸಮಯಕ್ಕೂ ಉಪಯುಕ್ತ.

ತೆಂಗಿನ ಮರದ ಆಕಾರದಲ್ಲಿ ಎತ್ತರವಾಗಿ ದಪ್ಪವಾಗಿ ಬೆಳೆಯುವ ಮರ ಬೈನೆ ಮರ ಇದರ ಕೆತ್ತೆಯನ್ನು ಸಂಗ್ರಹಿಸಿಕೊಂಡು 2 ಕಲ್ಲು ಉಪ್ಪು ಸೇರಿಸಿ ಗುದ್ದಿ ರಸ ತೆಗೆದು ಊಟದ ನಂತರ 2 ಹೊತ್ತು ಕುಡಿಯಬೇಕು. ಇದು ಕೆಂಪು ಸೆರಗು ವಿಪರೀತ ಇದ್ದವರಿಗೆ ಮಾತ್ರ ಉಪಯೋಗ ಸೂಕ್ತ. ಮುಟ್ಟಿನ ಸಮಯದಲ್ಲಿನ ಈ ಲಕ್ಷಣಕ್ಕೆ ಈ

ಔಷಧ ಬೇಡ. ಬಹಳ ಉಷ್ಣವಾಗಿರುವ ಕಾರಣ ಅರ್ಧ ಲೋಟದಂತೆ ಕುಡಿದರೆ ಸಾಕು.

**ಮೂತ್ರದಲ್ಲಿ ಕಲ್ಲು**

ಕಲ್ಲುಬಾಳೆ ಎಂಬುದು ಗುಡ್ಡೆಗಳಲ್ಲಿ ಬೆಳೆಯುವ ತುಂಬಾ ದಪ್ಪವಾಗಿ ಮತ್ತು ಗೊನೆಯನ್ನು ಹಾಕುವ ಬಾಳೆ, ಇದರ ಕಾಯಿ ತುಂಬಾ ಗಟ್ಟಿಯಾಗಿ ಕಲ್ಲಿನ ತರ ಇರುತ್ತದೆ. ಈ ಬಾಳೆಯ ಗೆಡ್ಡೆಯನ್ನು ಅಗೆದು ಚೆನ್ನಾಗಿ ತೊಳೆದು ಜಜ್ಜಿ ರಸ ತೆಗೆದು ಖಾಲಿ ಹೊಟ್ಟೆಗೆ ತೆಗೆದುಕೊಳ್ಳುವುದು. $^1/_2$ ಲೋಟದಂತೆ ಹತ್ತು ದಿನ ತೆಗೆದುಕೊಂಡರೆ ಕಲ್ಲು ಹೊರ ಬರುತ್ತದೆ.

**ಹೊಟ್ಟೆಯ ಕೂದಲು ಹೋಗಲು**

ನಮಗೆ ಗೊತ್ತಿಲ್ಲದೆ ಕೂದಲು ಉಗುರುಗಳಂತಹ ಕೆಟ್ಟ ವಸ್ತು ನಮ್ಮ ಹೊಟ್ಟೆ ಸೇರುತ್ತದೆ. ಇದಕ್ಕೆ ಬಾಳೆ ಗಿಡದ ಮೇಲಿನ ಸಿಪ್ಪೆ ತೆಗೆಯುತ್ತಾ ಬಂದಾಗ ಒಳಗಡೆ ಟಿಬ್ಯುಲೇಟ್‌ನಂತಹ ಭಾಗ ಉಳಿಯುತ್ತದೆ. ಇದನ್ನು ಪದಾರ್ಥ ಮಾಡಿ ತಿನ್ನುವುದರಿಂದ ಹೊಟ್ಟೆ ಒಳಗಿನ ವಿಷಯುಕ್ತ ಹೊರಬರುತ್ತದೆ. ಆಗಾಗ ಈ ಪದಾರ್ಥ ಮಾಡಿ ಊಟ ಮಾಡುವುದು ಒಳ್ಳೆಯದು.

**ಹಲ್ಲು ತೂತು ಮತ್ತು ನೋವು**

ಹಲ್ಲಿನಲ್ಲಿ ತೂತು ಆಗಿ ಏನು ತಿಂದರೂ ಕಡ್ಡಿ ಹಾಕುತ್ತಾರೆ. ಇದರಿಂದ ಹಲ್ಲಿನ ತೂತು ದೊಡ್ಡದಾಗಿ ನೋವು ಉಂಟಾಗುತ್ತದೆ. ಈ ನೋವಿಗೆ ಉಪ್ಪು, ಬೆಳ್ಳುಳ್ಳಿ ಮತ್ತು ಪಾಜವು ಗಿಡ ಇದನ್ನು ದನಗಳು ತಿನ್ನುತ್ತವೆ ಮತ್ತು ಎಲೆಗಳಲ್ಲಿ ತುರಿಕೆಯನ್ನು ಮಾಡುತ್ತದೆ. ಇದರಲ್ಲಿ ಎರಡು ವಿಧ– ಪಾಜವು ಇದ್ದು ಚಿಕ್ಕ ಚಿಕ್ಕ ಎಲೆಗಳಿಂದ ಕೂಡಿದರೆ ಇನ್ನೊಂದು ಅಂಡೆ ತಾಜವು ಎಲೆಗಳು ದೊಡ್ಡದಾಗಿರುತ್ತದೆ. ಉಳಿದಂತೆ ಎಲ್ಲಾ ಲಕ್ಷಣಗಳು ಒಂದೇ ಈ ಉಪ್ಪು, ಬೆಳ್ಳುಳ್ಳಿ ಪಾಜವೂ ಎಲೆಗಳನ್ನು ಮಿಶ್ರಣ ಮಾಡಿಕೊಂಡು ಹುಡಿಮಾಡಿ ಸಣ್ಣ ಸಣ್ಣ ಮಾತ್ರೆಯ ಆಕಾರದಲ್ಲಿ ಉಂಡೆ ಮಾಡಿ ಬಿಸಿಲಿನಲ್ಲಿ ಒಣಗಿಸಿಕೊಳ್ಳಬೇಕು. ನೋವು ಕಂಡಾಗ ಆ ಭಾಗಕ್ಕೆ ಇಟ್ಟುಕೊಳ್ಳುವುದು ಉತ್ತಮ.

**ಹೊಟ್ಟೆ ಹುಳು**

ಹೊಟ್ಟೆಯಲ್ಲಿ ಹುಳುಗಳು ಕುತ್ತಿಟ್ಟ ಹಾಗೇ ಆಗುತ್ತದೆ. ಮತ್ತು ಮಲ ವಿಸರ್ಜನೆಯಲ್ಲಿ ಸಣ್ಣ ಸಣ್ಣ ಹುಳಗಳು ಕಂಡು ಬರುತ್ತವೆ. ಇದಕ್ಕೆ ಪಪ್ಪಾಯಿ ಹಣ್ಣನ್ನು ಬೆಳಿಗ್ಗೆ ಖಾಲಿ ಹೊಟ್ಟೆಗೆ ಎರಡು ತುಂಡುಗಳ ಹಾಗೆ 4 ದಿನ ತಿನ್ನಬೇಕು.

ಹೊಟ್ಟೆಯಲ್ಲಿನ ಯಾವುದೇ ತರಹದ ಹುಳುವಿನ ತೊಂದರೆಗೆ ಸೂಳೆ ಸೊಪ್ಪಿನ

ರಸ ಕುಡಿಯುವುದು. ಹಾಗಲಕಾಯಿ ಎಲೆಯ ರಸ ತೆಗೆದು ಜೇನು ತುಪ್ಪ ಸೇರಿಸಿ ಕುಡಿಯುವುದು.

**ಕೆಂಪು ಕಜ್ಜಿ**

ಮೈಮೇಲೆ ಏಳುವ ಇತರ ಕಜ್ಜಿಗಿಂತ ಇದು ಭಿನ್ನವಾಗಿದೆ. ಕೆಂಪು ಬಣ್ಣದಿಂದ ಕೂಡಿದು ತುರಿಕೆ ಇರುತ್ತದೆ. ಕಹಿಬೇವು ಎಲೆಗಳನ್ನು ಕಷಾಯ ಮಾಡಿ ಬೆಳಿಗ್ಗೆ ಖಾಲಿ ಹೊಟ್ಟೆಗೆ 3 ದಿನ ಸೇವಿಸಬೇಕು.

**ಮುಖದ ಕಾಂತಿ, ಮೊಡವೆ**

ಮುಖದಲ್ಲಿ ಮೂಡುವ ಮೊಡವೆಯನ್ನು ಉಗುರುಗಳಿಂದ ಚಿವುಟುವುದು ತುರಿಸುವುದು, ಮಾಡದೆ ಹಸಿ ಎಳ್ಳನ್ನು ಗೋ ಮೂತ್ರದಲ್ಲಿ ಅರೆದು ಮೂರು ಸಲ ಹಚ್ಚುವುದು.

ಕೊತ್ತಂಬರಿ ಸೊಪ್ಪು ಮತ್ತು ನಿಂಬೆ ರಸವನ್ನು ಸೇರಿಸಿ ಅರೆದು ಹಚ್ಚುವುದರಿಂದ ಮುಖ ಹೊಳೆಯುತ್ತದೆ. ಹಾಲಿನ ತೆನೆಯನ್ನು ಮುಖಕ್ಕೆ ಹಚ್ಚಿಕೊಳ್ಳುವುದು ತರಕಾರಿ ಕತ್ತರಿಸುವಾಗ ಸಿಗುವ ರಸವನ್ನು ಮುಖಕ್ಕೆ ಹಚ್ಚಿಕೊಳ್ಳುವುದರಿಂದ ಮುಖದ ಚೆಲುವು ವೃದ್ದಿಸುವುದು ಶಾಂತವಾಗುತ್ತದೆ.

ನಿಂಬೆ ರಸವನ್ನು ಮುಖ ಕುತ್ತಿಗೆ ಮತ್ತು ಕೈಗಳಿಗೆ ಪ್ರತಿದಿನ ಸವರುವುದರಿಂದ ಚರ್ಮ ಹೊಳೆಯುತ್ತದೆ.

**ತಲೆಯಲ್ಲಿ ಹೊಟ್ಟು, ಹೇನು**

ಸೀತಾಫಲ ಮರದ ಎಲೆಗಳನ್ನು ಚೆನ್ನಾಗಿ ಜಜ್ಜಿ ಸ್ವಲ್ಪ ನೀರು ಸೇರಿಸಿಕೊಂಡು ತಲೆಗೆ ಲೇಪನ ಮಾಡಿ ಎರಡು ಗಂಟೆಗಳ ನಂತರ ತಲೆ ತೊಳೆದುಕೊಳ್ಳಬೇಕು. ಇದು ತಲೆ ಹೊಟ್ಟು ಮತ್ತು ಹೇನುಗಳ ನಾಶಕ್ಕೆ ದಿವ್ಯ. ಆದರೆ ಕಣ್ಣಿಗೆ ಮುಟ್ಟದ ಹಾಗೆ ತಲೆಗೆ ಬಟ್ಟೆ ಕಟ್ಟಿಕೊಳ್ಳಬೇಕು.

ತೆಂಗಿನಕಾಯಿ ಹಾಲು ತೆಗೆದು ತಲೆಗೆ ಹಚ್ಚಿಕೊಂಡು ಚೆನ್ನಾಗಿ ಬಾಚಬೇಕು. ಮೂರು ಗಂಟೆಗಳ ನಂತರ ಸೀಗೆಕಾಯಿಯಲ್ಲಿ ತಲೆ ಸ್ನಾನ ಮಾಡಿದರೆ ಕೂದಲು ಉದುರುವುದು ನಿಂತು ಹೋಗುತ್ತದೆ. ನಿಂಬೆ ರಸ ಮತ್ತು ನೆಲ್ಲಿಕಾಯಿ ಎಣ್ಣೆ ನಾವು ಮಾಡಿಕೊಂಡರೆ ಉತ್ತಮ ಅಥವಾ ಅಂಗಡಿಗಳಲ್ಲಿ ದೊರೆಯುತ್ತದೆ. ಇದರ ಮಿಶ್ರಣ ನಾಲ್ಕು ದಿನ ಕೂದಲಿಗೆ ಹಚ್ಚಿಕೊಂಡರೆ ಹೆಳಪು ಗಟ್ಟಿಯಾಗುತ್ತದೆ. ಹೀಗೆ 2 ತಿಂಗಳಿಗೊಮ್ಮೆ ಮಾಡಿಕೊಂಡರೆ ಒಳ್ಳೆಯದು.

**ಕಿವಿ ಸೋರುವುದು**

ಮಳೆಗಾಲದಲ್ಲಿ ಶೀತ ಗಾಳಿ ಕಿವಿಗೆ ಹೊಡೆದು ಇಲ್ಲಿ ನೀರು ಹೋಗಿ ಕಿವಿಯಲ್ಲಿ

ನೀರು ಬರುತ್ತದೆ. ಸಣ್ಣಗೆ ನೋವು ಕಾಣಿಸಬಹುದು. ಈರುಳ್ಳಿ ರಸವನ್ನು ಕಾಯಿಸಿ ತಣ್ಣಗೆಯಾದ ನಂತರ 2 ಹೊತ್ತು 2 ಬಿಂದು ಹಾಕುವುದು.

ಕಾಮಕಸ್ತೂರಿ ಎಲೆಯನ್ನು ತೆಂಗಿನ ಎಣ್ಣೆಯಲ್ಲಿ ಬಿಸಿ ಮಾಡಿದಾಗ ಅದರ ರಸ ಬಿಡುತ್ತದೆ. ತಂಪು ಆದಾಗ 2 ಹೊತ್ತು 2 ಬಿಂದುವಿನಂತೆ ಬಿಡುವುದು. ಯಾವುದೇ ಗಾಯಗಳಾಗದೆ, ಕ್ರೀಮಿಗಳು ಕಿವಿಗೆ ಸೇರದೆ ಕಿವಿ ನೋವು ಕಾಣಿಸಿಕೊಂಡರೆ ಚೆಂಡು ಹೂವಿನ ರಸವನ್ನು ತೆಂಗಿನ ಎಣ್ಣೆಯಲ್ಲಿ ಬಿಸಿ ಮಾಡಿಕೊಂಡು ಬಿಳಿ ಬಟ್ಟೆಯಲ್ಲಿ ಶುದ್ಧ ಎಣ್ಣೆಯನ್ನು ಬೇರ್ಪಡಿಸಿ ಬಿಸಿ ತಗ್ಗಿದ ನಂತರ ದಿನಕ್ಕೆ 2 ಸಲ ಕಿವಿಗೆ ಬಿಡಬೇಕು.

**ಮೂತ್ರ ಮಾಡುವಾಗ ಉರಿ**

ಶರೀರ ಉಷ್ಣವಾದಾಗ ಮೂತ್ರ ಉರಿ ಉರಿಯಾಗಿ ಹೋಗುತ್ತದೆ. ಕೊತ್ತಂಬರಿ ಮತ್ತು ಜೀರಿಗೆಯನ್ನು ಸಮ ಪ್ರಮಾಣದಲ್ಲಿ ಹುಡಿ ಮಾಡಿಕೊಂಡು ಕುಡಿಯುವ ನೀರಿಗೆ ಅಥವಾ ಹಾಲಿನಲ್ಲಿ ಹಾಕಿ ಕಷಾಯ ಮಾಡಿಕೊಳ್ಳಬೇಕು. ರುಚಿಗೆ ಕಲ್ಲು ಸಕ್ಕರೆ ಉಪಯೋಗಿಸಿಕೊಂಡು ಕುಡಿಯಬಹುದು. ಕಾಫಿ ಚಾ ದ ಬದಲು ಈ ಕಷಾಯ ಆರೋಗ್ಯದಾಯಕ.

**ಚೇಳು ಕಡಿತ**

ತರಕಾರಿ ಪಟ್ಟಿಯಲ್ಲಿ ಬರುವ ಕೆಂಬುಡೆ ಕಾಯಿಯ ತೊಟ್ಟನ್ನು ಅರೆದು ಹಚ್ಚುವುದು. ಈಶ್ವರಿ ಬೇರನ್ನು ನಿಂಬೆ ರಸದಲ್ಲಿ ಅರೆದು ಹಚ್ಚುವುದು.

**ಮಂಗನ ಬಾವು**

ತುಂಬೆಯ ಎಲೆಗಳಿಗೆ ಬೆಲ್ಲ ಸೇರಿಸಿ ಚೆನ್ನಾಗಿ ಅರೆದು ಗೌತಲಮ್ಮ ಅಥವಾ ಮಂಗನ ಬಾವು ಇರುವ ಜಾಗಕ್ಕೆ ಪದೇ ಪದೇ ಹಚ್ಚುತ್ತಿದ್ದರೆ ನೋವು ಊತ ಕಡಿಮೆಯಾಗುತ್ತದೆ.

ಹಲಸಿನ ಮರದಲ್ಲಿ ಮಣ್ಣಿನ ಮುದ್ದೆಯ ರೀತಿ ಅಣಬೆ ಬೆಳೆಯುತ್ತದೆ. ಮರ ಅಣಬೆ ಎನ್ನುತ್ತೇವೆ. ಕಂದು ಬಣ್ಣದಿಂದ ಕೂಡಿರುತ್ತದೆ. ಇದನ್ನು ಅಕ್ಕಿ ತೊಳೆದ ನೀರಿನಲ್ಲಿ ಅರೆದು ಪದೇ ಪದೇ ಹಚ್ಚಬೇಕು.

**ರಕ್ತ ಭೇದಿ**

ಒಂದು ಸಣ್ಣ ಚಮಚ ಮೆಂತ್ಯೆಯನ್ನು ಗಟ್ಟಿ ಮೊಸರಿನಲ್ಲಿ ಬೆರೆಸಿ ಒಂದು ದಿನ ಬಿಟ್ಟು ನಂತರ ಜಗಿದು ನುಂಗಬೇಕು. ಮುಟ್ಟಿದರೆ ಮುನಿ ನಾಚಿಕೆ ಮುಳ್ಳಿನ ಗಿಡಗಳನ್ನು ಬೇರು ಸಹಿತ ಕಿತ್ತು ಕಷಾಯ ಮಾಡಿ ಕುಡಿಯುವುದು ಬೆಳಿಗ್ಗೆ ಖಾಲಿ ಹೊಟ್ಟೆಗೆ 5 ದಿನ ತೆಗೆದುಕೊಳ್ಳಬೇಕು.

**ನಾಯಿ ಕಡಿತ**

ಕಾಡಿನಲ್ಲಿ ಸಿಗುವ ನಾಯಿಕುಳಿ ಎಂಬ ಗಿಡ ಮುಳ್ಳನ್ನು ಹೊಂದಿರುತ್ತದೆ. ಇದರ ಎಲೆಗಳನ್ನು ಕಲಗಚ್ಚಿನಲ್ಲಿ ಅರೆದು ಲೇಪಿಸುವುದು.

**ಚೇರೆ ಸೊನೆಯಿಂದ ಗಾಯ**

ಕಾಡಿನಲ್ಲಿ ಚೇರೆ ಮರಗಳಿರುತ್ತವೆ. ಬುಡದಲ್ಲಿ ಚಿಕ್ಕ ಚಿಕ್ಕ ಗಿಡಗಳಿರುತ್ತವೆ. ಸೊಪ್ಪು ಕತ್ತರಿಸುವಾಗ ಅಥವಾ ನಡೆದಾಡುವವರು ಆ ಗಿಡಗಳನ್ನು ಕತ್ತರಿಸಿದಾಗ ಅದರ ಸೊನೆಯಿಂದ ಚರ್ಮವೆಲ್ಲ ಎದ್ದು ಹೋಗುತ್ತದೆ. ಕೆಲವರಿಗೆ ಸಮಸ್ಯೆಯಾಗುವುದಿಲ್ಲ. ಕೆಲವರಿಗೆ ವಿಪರೀತವಾಗುತ್ತದೆ. ಆ ಗಾಯಗಳಿಗೆ ಬೃಹದಾಕಾರವಾಗಿ ಬೆಳೆಯುವ ಶಾಂತಿ ಮರದ ಕೆತ್ತೆಯನ್ನು ತೆಂಗಿನ ಎಣ್ಣೆಯಲ್ಲಿ ಕಾಯಿಸಿಕೊಂಡು ಹಚ್ಚುವುದು.

**ಮೈಯಲ್ಲಿ ಬೀಳುವುದು (ಬಿಸುಪ್ಪು)**

ಮೈಯ ಮೇಲೆಲ್ಲ ಸೊಳ್ಳೆ ಕಡಿತದಿಂದ ಬರುವ ಹಾಗೇ ಸಣ್ಣ ಸಣ್ಣ ಕಜ್ಜಿಗಳಾಗಿ ಬಂದು ತುರಿಕೆಯಿಂದ ಕೂಡಿರುತ್ತದೆ. ಸಾಂಬ್ರಾಣಿಯ ಐದಾರು ಎಲೆಗಳನ್ನು ಜಜ್ಜಿ ಹೊಟ್ಟೆಗೆ ಕುಡಿಯುವುದು ಮತ್ತು ಮೈಗೆ ಹಚ್ಚುವುದು.

ಪೊಲ್ ಸೊಪ್ಪು ಎನ್ನುವ ಸಣ್ಣ ಮರವಾಗಿ ಬೆಳೆಯುವ ಇದು ಸಣ್ಣ ಸಣ್ಣ ಎಲೆಗಳಿಂದ ಕೂಡಿರುತ್ತದೆ. ಇದರ ಎಲೆಗಳನ್ನು ನೀರಿನಲ್ಲಿ ಅರೆದು ಕುಡಿಯಬೇಕು. ಬೆಳಿಗ್ಗೆ ಖಾಲಿ ಹೊಟ್ಟೆಗೆ ದಿನಕ್ಕೆ 3 ಸಲ ಮೈಗೂ ಹಚ್ಚಬೇಕು.

**ಬಾಯಿ ಹುಣ್ಣು**

10 ತುಳಸಿ ಎಲೆಗಳನ್ನು ಬಾಯಲ್ಲಿ ಜಗಿದು ನಾಲಿಗೆಯಿಂದ ಚೆನ್ನಾಗಿ ಬಾಯಾಡಿ ಸ್ವಲ್ಪ ಹೊತ್ತು ಬಿಟ್ಟು ನೀರಿನಿಂದ ಬಾಯಿ ಮುಕ್ಕಳಿಸುತ್ತಿದ್ದರೆ ಹುಣ್ಣು ಕಡಿಮೆಯಾಗಿ ಬಾಯಿ ಶುದ್ಧಿಯಾಗುವುದು.

## ಮಕ್ಕಳ ಸಮಸ್ಯೆಗಳು

**ಮಾತಾನಾಡುವುದು**

ನೀರಾವರಿ ಪ್ರದೇಶಗಳಲ್ಲಿ ಬೆಳೆಯುವ ಸಣ್ಣ ಗಿಡ ಬಜೆ ಅಂಗಡಿಗಳಲ್ಲೂ ದೊರೆಯುತ್ತದೆ. ಇದರ ಬೇರನ್ನು ಜೇನಿನಲ್ಲಿ ಅರೆದು ಅರ್ಧ ಚಮಚದಷ್ಟು 15 ದಿನಕ್ಕೊಮ್ಮೆ 2 ವರ್ಷ ತನಕ ಕೊಡಬಹುದು. ಮಕ್ಕಳು ಸರಾಗವಾಗಿ ಮಾತನಾಡಲು ನಾಲಿಗೆಯನ್ನು ತಯಾರುಗೊಳಿಸುತ್ತದೆ. ಹಾಲು ಉಣ್ಣುವ ಮಕ್ಕಳಿಗೆ ತಾಯಿ ಹಾಲಿನಲ್ಲಿಯೇ ಅರೆದು ಕೊಡಬಹುದು.

**ಮೂತ್ರ ವಾಸನೆ**

ಸುಗಂಧಿ ಗಿಡದ ಬೇರನ್ನು ಹಾಲಿನಲ್ಲಿಯೇ ಅರೆದು ಅರ್ಧ ಚಮಚದಂತೆ 3 ದಿನ ಕೊಡಬೇಕು.

**ಅಗ್ರ**

ಪೇರಳೆ ಚಿಗುರನ್ನು ಬೆಚ್ಚ ನೀರಿನಲ್ಲಿ ಅರೆದು ಒಂದು ಚಮಚ ಒಂದು ಹೊತ್ತು ಸಾಕು. ಬಾಳೆಗೊನೆಯಲ್ಲಿನ ಪೂಂಬೆಯನ್ನು ಮುರಿದಾಗ ಸಿಗುವ ರಸವನ್ನು ಬಿಳಿ ಬಟ್ಟೆಯನ್ನು ಮಗುವಿನ ನಾಲಿಗೆಗೆ ಸವರುವುದು.

**ಜ್ಞಾನ ಶಕ್ತಿ**

ತಿಮರೆ ಗಿಡದ ಎಲೆಗಳನ್ನು ತೊಳೆದು ಜಜ್ಜಿ ರಸ ತೆಗೆದು ಆಗಾಗ ಕೊಡುತ್ತಿರಬಹುದು. ಸ್ವಲ್ಪ ದೊಡ್ಡ ಮಕ್ಕಳು ಹಾಗೇ ಎಲೆಗಳನ್ನು ತಿಂದರೂ ಒಳ್ಳೆಯದೆ. ತುಳಸಿ ಎಲೆಗಳನ್ನು ತಿನ್ನುವುದು ಉತ್ತಮ.

**ಗಟ್ಟಿ ವಸ್ತು ನುಂಗುವುದು**

ಮಕ್ಕಳು ಗಟ್ಟಿ ವಸ್ತುಗಳನ್ನು ನುಂಗಿದಾಗ (ನಾಣ್ಯಗಳು) ಬಾಳೆಹಣ್ಣುಗಳನ್ನು ತಿನ್ನಿಸುವುದು. ದೊಡ್ಡವರಿಗೂ ಆಗುತ್ತದೆ. ಹಣ್ಣುಗಳನ್ನು ತಿನ್ನುವುದರಿಂದ ಮಲ ವಿಸರ್ಜನೆ ಚೆನ್ನಾಗಿ ನಡೆದು ವಸ್ತು ಹೊರ ಹೋಗುತ್ತದೆ.

**ಕಿವಿ ಸೋರುವುದು, ನೋವು**

ಮಕ್ಕಳಲ್ಲಿ ಕಿವಿಗಳಿಗೆ ಗಾಳಿ ಹೊಡೆದಾಗ ನೀರು ಹೋಗಿ ನೋವು ಕಾಣಿಸಿಕೊಂಡು ನೀರು ಬರುತ್ತದೆ. ಇದಕ್ಕೆ ಕಾಮಕಸ್ತೂರಿ ಗಿಡದ ಎಲೆಗಳನ್ನು ತೆಂಗಿನ ಎಣ್ಣೆಯೊಂದಿಗೆ ಬಿಸಿ ಮಾಡಿಕೊಂಡು ತಣಿಸಿಕೊಂಡು ಎರಡು ಬಿಂದು ಎರಡು ಹೊತ್ತು ಬಿಡುವುದು.

**ಕೆಮ್ಮು ನೆಗಡಿ**

ತುಳಸಿ ಮತ್ತು ಶುಂಠಿ ರಸವನ್ನು ಸಮ ಪ್ರಮಾಣದಲ್ಲಿ ಬೆರೆಸಿ ಚಮಚದಷ್ಟು ಕೊಡುವುದು.

ಸಣ್ಣ ಮಕ್ಕಳಲ್ಲಿ ಶೀತದಿಂದ ತಲೆನೋವು ಕೂಡ ಬರುತ್ತದೆ. ಆದರೆ ನಮ್ಮ ಗಮನಕ್ಕೆ ಬಾರದೆ ಹೋಗುತ್ತದೆ. ಇದರಿಂದ ಮಕ್ಕಳು ನಿದ್ದೆ ಮಾಡುವುದಿಲ್ಲ. ಕೂಗುತ್ತಾರೆ ಇದಕ್ಕೆ ಸ್ನಾನದ ನಂತರ ಕಚೋರ ಗಿಡದ ಬೇರನ್ನು ನೀರಿನಲ್ಲಿ ಅರೆದು ಬಿಸಿಮಾಡಿ ಹಣೆಗೆ ಮತ್ತು ನೆತ್ತಿಗೆ ಹಾಕುವುದು.; ಇದು ತಲೆಯಲ್ಲಿನ ನೀರಿನ ಅಂಶವನ್ನು ಹೀರುತ್ತದೆ.



# ಸಾಹುಕಾರನ ಮಗಳ ಮೊದುವೆ

ಭವಾನಿಶಂಕರ್ ಹೊದ್ದೆಟಿ

ಸಾಹುಕಾರನ ಮಗಳಿಗೆ ಮೊದುವೆ । ಗಂಡ್‌ನ ನೋಡಿದ್ದೊ।
ಈ ತಿಂಗಳ ಹತ್ತಕೆ ಮಗಳ ಮೊದುವೆಂತಾ ತೀರ್ಮಾನ ಮಾಡಿದ್ದೊ।
ಂ0ನ್ನಾಭರಣ ಒಡವೆಗಳೆಷ್ಟೊ। ಗೂಡೆಗೆ ಮಾಡ್‌ಸಿದ್ದೊ।
ಮಗಳ ಮೊದುವೆನ ಗೌಜಿಲಿ ಮಡೊಕೂಂತ ಮನೆವು ಬಯಸಿದ್ದೊ॥
ತರತರ ಬಣ್ಣದ ರೇಶ್ಮೆ ಸೀರೆಗಳ। ಎಷ್ಟೋ ತೆಗ್‌ದಿದ್ದೊ।
ಐವತ್ತ್ ಲಕ್ಷಂದ ಮೇಲೆನೆ ಈಗಳೆ। ಖರ್ಚ್‌ವು ಮಾಡಿದ್ದೊ॥

ಸಾಹುಕಾರನ ಮಗಳ ಮೊದುವೆನ। ಕಾಗದ ಹಂಚಿದ್ದೊ।
ಊರ್‌ಲಿ ಇರುವ ಧನಿಕರಿಗೆಲ್ಲ। ಕಾಗದ ಕೊಟ್ಟಿದ್ದೊ।
ಬಡ ಜನಕೆಲ್ಲ ಕಾಗದ ಕೊಡದೆ । ಅವರ ಬುಟ್ಟಿದ್ದೊ।
ದೊಡ್ಡ ದೊಡ್ಡವು ಮಾತ್ರನೇ ಮದುವೆಗೆ ಸಾಕ್‌ತೇಳಿದ್ದೊ॥

ಸಾವುಕಾರನ ಮನೆಗೆ ನೆಂಟ್ರ್‌ಗ । ಬಹಳ ಜನ ಬಂದಿದ್ದೊ।
ಮೊದುವೆಗೆ ದಿನ ಇರಿಕನ ನೆಂಟ್ರ್‌ಗ । ಮನೆನ ತುಂಬಿದ್ದೊ
ಬಂದವು ಎಲ್ಲವು ಮೈಕೈತುಂಬಾ। ಒಡವೆಗ ಹಾಕಿದ್ದೊ।
ಹೊರಗೆ ತಿರ್‌ಗಿಕೆ ಹೋಕನ ಜನಂಗೆಲ್ಲ। ಅವರನೆ ನೋಡ್‌ತಿದ್ದೊ॥

ಮೊನ್ನೆ ಕತ್ತಲೆಗೆಲ್ಲವು ಉಂಡ್‌ದ್ ಮನೆವೆಲ್ಲವು ಮೊಲ್‌ಗಿದ್ದೊ।'
ದಿನೆಲ್ಲ ಮನೆಲಿ ಓಡಾಡಿದ್। ಅವು ಎಲ್ಲ ಬೊಚ್ಚಿದ್ ಹೋಗಿದ್ದೊ।
ಬಂದ ನೆಂಟ್ರ್ ಹೆಚ್ಚಿನ ಜನಂಗ।   ಗೊರ್ಕೆನ ಹೊಡಿತಿದ್ದೊ।
ಕಳ್ಳರ್ ಬಾಗಿಲ್  ಮುರ್ದ್‌ದ್ ಮನೆನ ಒಳಗೆ ಬಂದಿದ್ದೊ॥

ಮೊದುವೆಗೆ ಮಾಡಿದ ಎಲ್ಲಾ ಒಡವೆನ। ಕಳ್ಳರ್ ದೋಚಿದ್ದೊ।
ನಿದ್ದೆ ಮಾಡ್ದವರೆಲ್ಲರ ಚಿನ್ನನ।ಬಿಚ್ಚಿಕಂಡ್ ಹೋಗಿದ್ದೊ।
ಕಪಾಟ್‌ಲಿದ್ದ ಲಕ್ಷ ಲಕ್ಷ ದುಡ್ಡ್‌ನ ಲಪಟಾಯಿಸಿದ್ದೊ।
ಯಾರಿಗೂ ತಿಳಿಯದೆ ಎಲ್ಲನೂ।ದೋಚಿ ಪರಾರಿಯಾಗಿದ್ದೊ॥

ಸಾಹುಕಾರನ ಮನೆಲಿರವೆಲ್ಲವು। ಬೊಳ್‌ಪುಗೆ ಎದ್ದಿದ್ದೊ।
ಯಾರ ಮೈಲಿನು ಒಡವೆಗ ಇಲ್ಲದೆ। ಕಂಗಾಲಾಗಿದ್ದೊ॥
ಮನೆಲಿದ್ದ ಎಷ್ಟೋ ಜನ ಬೆಳಿಗೆ ತಿಂಡಿನು।ತಿಂದೂ ಹೋಗಿದ್ದೊ।
ಹೆಣ್ಣ್ ಜನಂಗ ಮನೆಲಿದ್ದ ಎಲ್ಲವೂ। ಕಿರ್ಚಾಡುತ ಇದ್ದೊ ॥



# ಗಾದೆಗಳು

ಸಂಗ್ರಹ : **ಪೂವಪ್ಪ ಕಣಿಯೂರು**

- ಅಕ್ಕಂಗೆ ಆಳಿಲ್ಲೆ, ಕುಕ್ಕಂಗೆ ಕೂಳಿಲ್ಲೆ
- ಅತ್ತೆ ಮೇಲೆ ಸಿಟ್ಟ್, ಕೊತ್ತಿಗೆ ಪೆಟ್ಟ್
- ಯಾರದೋ ಕಾಸ್ ಯಲ್ಲಮ್ಮನ ಜಾತ್ರೆ
- ಕೊಡ್ದು ಮೂರ್ ಕಾಸ್, ತೊಂಬರ ತುಂಬ ಹಾಸ್
- ಗಂಡ ಪಟ್ಟೆ ಸೀರೆ ತಂದದೆಂತ, ಹೆಣ್ಣ್ ಇದ್ದ ಸೀರೆನ ಸುಟ್ಟತ್ ಗಡ
- ತಾನ್ ಕಳ್ಳ, ಪರರ ನಂಬ
- ಕುಂಬಳಕಾಯಿ ಕದ್ದಂವ ಹೆಗಲ್ ಮುಟ್ಟಿ ನೋಡ್ತ್ ಗಡ
- ಮಟ್ಟ ತಿಳ್‌ಕಣದೆ ಮಾತಾಡ್ ಬಡ
- ಮನೆ ಕಟ್ಟಿ ನೋಡು ಮೊದ್ವೆ ಮಾಡಿ ನೋಡು
- ಸತ್ಯದ ಕೆಲ್ಸ ಶಾಶ್ವತ
- ಸಾಲ್‌ಲಿ ಬಂದ ಹಣ ನೀರ್‌ಲಿ ಹೋದಂಗೆ
- ಹುಟ್ಟ್ ಗುಣ ಬೆಟ್ಟ ಹತ್ತಿರೂ ಹೋಕಿಲ್ಲೆ
- ಹೇಳ್ದು ಪುರಾಣ ಹಾಕುದು ಗಾಳ
- ಹಿರಿ ಅಕ್ಕನ ಚಾಳಿ ಮನೆ ಮಕ್ಕಂಗೆಲ್ಲಾ
- ಎತ್ ಏರಿಗೆಳಿಯಕಾಕನ ಕೋಣ ನೀರಿಗೆಳ್ದದೆ
- ಮಜ್ಜಿಗೆಗೆ ಬಂದವಂಗೆ ಎಮ್ಮೆ ಕ್ರಾಯ ಯಾಕೆ?
- ನೀರ್‌ನ ಮೇಲ್ನ ಗುಳ್ಳೆನಂಗೆ
- ಸಾಲ ಮಾಡ್ಲುಬೇಡ, ಸಾಲ ತಕಂಬದೂ ಬೇಡ
- ಸಂಕಟ ಬಾಕನ ವೆಂಕಟರಮಣ
- ಸಾವುಕಾರನ ಊಟ ಕಾಯಿಲೆಗೆ, ಬಡವನ ಊಟ ಆರೋಗ್ಯಕ್ಕೆ
- ಇಪರೀತ ಬುದ್ಧಿ ಅಭಿಮಾನ ಭಂಗ
- ಐಸೊರ್ಯ ಬಾಕನ ಅರ್ದ ರಾತ್ರಿಲಿ ಕೊಡೆ ಹಿಡ್ದಂಗೆ
- ಅಂಬು ಅಟ್ಟಲಿ ಬಿಲ್ಲ್ ಬೆಟ್ಟಲಿ
- ಕೆಟ್ಟ ಮೇಲೆ ಬುದ್ಧಿ ಸತ್ತ ಮೇಲೆ ದುಃಖ
- ಉದ್ಯೋಗನೆ ಪುರುಷ ಲಕ್ಷಣ ಗಡ
- ಇಳಿಯಕಾಕನ ತುಂಬಾ ಗ್ಯಾನ ಮಾಡ್
- ಹೊಟ್ಟೆಗೆ ಹಿಟ್ಟ್ ಇಲ್ಲೆ ಜುಟ್ಟಿಗೆ ಮಲ್ಲಿಗೆ ಹೂ
- ನೆಂಟ್ರ್ ಮೇಲೆ ಪ್ರೀತಿ ಅಕ್ಕಿ ಮೇಲೆ ಆಸೆ
- ಅಂಗ ಇಲ್ಲದವಂಗೆ ಮಂಗನ ಚೇಷ್ಟೆ

# ಹಲ್ಸಿನ ಕಾಯಿನ ಎಳ್ತ್ ಗುಜ್ಜೆನ ಉಪ್ಕರಿ

ಎಂ.ಜಿ. ಕಾವೇರಮ್ಮ

ಎಳ್ತ್ ಗುಜ್ಜೆ –1
ತೆಂಗಿನ ಕಾಯೆನ ಹೂವು – 2 ಮುಷ್ಟಿ
ಕೊತ್ತಂಬ್ರಿ ಬಿತ್ತ್ – 1 ಮುಷ್ಟಿ
ಹುಣ್ಸೆಹುಳಿ – ನೆಲ್ಲಿಕ್ಯಾನಷ್ಟ್
ಒಣ್ಗಿದ ಮೆಣ್ಸ್ – 6–7
ಉಪ್ಪು – ರುಚಿಗೆ ತಕ್ಕ ಹಾಂಗೆ
ಒಗ್ಗರಣೆಗೆ ಎಂಣೆ– 2 ಒಣ್ಗಿದ ಮೆಣ್ಸ್, 4 ಎಸಳ್ ಬೆಳ್ಳುಳ್ಳಿ, 1 ಚವುಂಟು ದಾಸಿಮೆ

**ಮಾಡುವ ಕ್ರಮ**

ಗುಜ್ಜೆನ ನೀಟಕ್ಕೆ 4 ತುಂಡು ಮಾಡಿ. ಮತ್ತೆ ಅಡ್ಡಕ್ಕೆ ತುಂಡು ಮಾಡಿ. ಇದರ ಇಡಿನೇ ಬೇಸಿ ಇಸಿಕಣಿ. ಅದರ ಮುಳ್ಳುಗ ಇರುವ ಚೋಲಿನ ಕ್ಯೊದ್‌ದ್ ತೆಗ್ಯನಿ. ಅದರ್‌ಂದ ಮೇಲೆ ಆ ಹೋಳ್‌ಗಳ ಒಂದು ಬಟ್ಲ್‌ಗೆ ಹಾಕಿ ಕೈಲಿ ಪುರುಂಚಿನಿ. ಅದ್ ಇಡ್ಕ್ ಇಡ್ಕ್ ಇರೊಕು. ಗುಜ್ಜೆ ಗಟ್ಟಿ ಇದ್ದರೆ ಗುಂಡ್ ಕಲ್ಲ್‌ಂದ ಗುದ್ದಿ ಹೊಡಿ ಮಾಡಿಕಣಿ.

ಒಲೆ ಮೇಲೆ ಬಣಲೆನ ಇಸಿ, ಸುರುಗೆ ಹಂಞ ಎಂಣೆ ಹಾಕಿ ಕೊತ್ತಂಬ್ರಿ ಹೊರ್ಕಣಿ. ಅರ್ಧ ಕೆಂಪಾಕನ ಅದ್ಕೆ ಉದ್ದ್‌ನ ಬೇಳೆನ ಹಾಕಿ ಹೊರ್ಕಣಿ. ಅದರ ತೆಗ್ದ್ ಒಂದು ಪಾತ್ರಕ್ಕೆ ಹಾಕಿ, ಒಣ್ಗಿದ ಮೆಣ್ಸ್‌ನನೂ ಹೊರ್ಕಣಿ.

ಮೆಣ್ಸ್, ಕಾಯೆ ಹೂ, ಹುಳಿನ ಮಿಕ್ಸಿಲಿ ಹಾಕಿ ಅರ್ರ್ಯನಿ. ಅದಕ್ಕೆ ಹೊರ್ದ ಕೊತ್ತಂಬ್ರಿ ಬಿತ್ತ್ ಮತ್ತೆ ಹೊರ್ದ ಉದ್ದ್ ನ ಬೇಳೆನ ಹಾಕಿನಿ. ಇಡ್ಕ್, ಇಡ್ಕ್ ಅರ್ದ್ ತೆಗ್ಯನಿ.

ಒಗ್ಗರಣೆ ಮಾಡಿಕೆ ಒಂದು ಬನಲೆಲಿ ಎಂಣೆ ಹಾಕಿ ಅದ್ಕೆ ಎರ್ಡ್ ಮೆಣ್ಸ್ ಮುರ್ದ್ ಹಾಕಿನಿ. ನಾಕ್ ಎಸ್‌ಳ್ ಬೆಳ್ಳುಳ್ಳಿನ ಗುದ್ದಿ ಹಾಕಿ. ಅದ್ ಕೆಂಪಾಕನ ದಾಸಿಮೆ ಹಾಕಿ ಹೊಟ್ಟಿಸಿನಿ. ಅದ್ಕೆ ಅರ್ದ ಅರ್ಪುನ ಹಾಕಿ, ಹಂಞ ನೀರ್ ಹಾಕಿ ಕೊದ್ಯಕೆ ಬುಡಿನಿ. ರುಚಿಗೆ ಬೇಕಸ್ಟ್ ಉಪ್ಪು ಹಾಕಿನಿ. ಅದ್ಕೆ ಹೊಡಿ ಮಾಡ್ದ ಗುಜ್ಜೆನ ಸೇರ್ಸಿನಿ. ಅದ್ಕೆ ಹಂಞ ಇಂಗ್ ನೀರ್‌ನ ಸೇರ್ಸಿನಿ (ಒಂದು ಕಡ್ಲೆ ಕಾಳ್ ಗಾತ್ರದ ಇಂಗ್ ಸಾಕ್) ಅದರ ಮೊರ್ಲ್ಲು ಮೊಗ್ಚಿ ಬಾವಡೆ ಮುಚ್ಚಿ. ಐದ್ ನಿಮಿಷದ ಮೇಲೆ ತೆಗ್ದ್ ತಿಂದ್ ನೋಡಿ.



## ಅಕಾಡೆಮಿ ಪ್ರಾಯೋಜಿಸಿದ ಕಾರ್ಯಕ್ರಮ:

1. 2016ರ ಜನವರಿ 05ರಂದ್, ಕರ್ನಾಟಕ ರಕ್ಷಣಾ ಯುವ ವೇದಿಕೆ, ಕುಶಾಲನಗರ ಇವು **"ಕನ್ನಡ ರಾಜ್ಯೋತ್ಸವ ಮತ್ತು ಕುವೆಂಪು ಜನ್ಮದಿನಾಚರಣೆ"** ಆಚರಿಸಿದ್ದ್ ಈ ಕಾರ್ಯಕ್ರಮಕ್ಕೆ ಅಕಾಡೆಮಿಂದ ಕಲಾತಂಡ ಪ್ರಾಯೋಜನೆ ನೀಡಿದ್ದೊ.
2. 2016ರ ಜನವರಿ 12ರಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕೊಡಗು ಇವು ಗಾಂಧಿ ಮೈದಾನ, ಮಡಿಕೇರಿ ಇಲ್ಲಿ ಆಯೋಜಿಸಿದ್ದ **"ಸ್ವಾಮಿ ವಿವೇಕಾನಂದ 154ನೇ ಜಯಂತೋತ್ಸವ"** ಕಾರ್ಯಕ್ರಮಕ್ಕೆ ಅಕಾಡೆಮಿಯಿಂದ ಕಲಾತಂಡ ಪ್ರಾಯೋಜನೆ ನೀಡಿದ್ದೊ.
3. 2016ರ ಜನವರಿ 31 ರಂದು ಮಂಡೆಕೋಲು **"ಶ್ರೀ ಮಹಾವಿಷ್ಣು ದೇವಸ್ಥಾನ ಮಂಡೆಕೋಲು ಇದರ ಪುನ: ಪ್ರತಿಷ್ಠಾ ಬ್ರಹ್ಮ ಕಳಶೋತ್ಸವ"** ದ ಪ್ರಯುಕ್ತ ಅಕಾಡೆಮಿಂದ ಸಾಂಸ್ಕೃತಿಕ ಕಾರ್ಯಕ್ರಮನ ಹಮ್ಮಿಕೊಂಡಿದ್ದೊ.

## ಅಕಾಡೆಮಿ ಹಮ್ಮಿಕಂಡ ಕಾರ್ಯಕ್ರಮ

6. 2016ರ ಮಾರ್ಚ್ 14 ರಂದು ಗೌಡ ಸಮಾಜ, ಮಡಿಕೇರಿ ಇಲ್ಲಿ **"2013-14ನೇ ಸಾಲಿನ ಗೌರವ ಪ್ರಶಸ್ತಿ ಸಮಾರಂಭ ಮತ್ತು ದಶ ಕೃತಿಗಳ ಬಿಡುಗಡೆ"** ಕಾರ್ಯಕ್ರಮನ ಹಮ್ಮಿಕಂಡ್, ಶ್ರೀ ದಿನೇಶ್ ಗುಂಡೂರಾವ್, ಸನ್ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಸಚಿವರು ಮತ್ತೆ ಕೊಡಗು ಜಿಲ್ಲಾ ಉಸ್ತುವಾರಿ ಸಚಿವರ್ ಕಾರ್ಯಕ್ರಮನ ಉದ್ಘಾಟನೆ ಮಾಡ್ದೊ. ಶ್ರೀ ಬಾರಿಯಂಡ ಜೋಯಪ್ಪ, ಮದೆ ಗ್ರಾಮ,ಮಡಿಕೇರಿ ಶ್ರೀ ಹೊದ್ದೇಟಿ ಭವಾನಿ ಶಂಕರ, ಬೆಂಗಳೂರು ಇವ್ಕೆ ಗೌರವ ಪ್ರಶಸಿ, ನೆನ್‌ಪ್‌ನ ಕಾಣಿಕೆ, ಫಲ ತಾಂಬೂಲ ನೀಡಿ ಶಾಲ್ ಹೊದಿಸಿ ಸನ್ಮಾನಿಸಿದೊ.

   ಅಕಾಡೆಮಿ ಪ್ರಕಟಿಸಿದ ಹತ್ತ್ ಕೃತಿಗಳ್ನ ಖ್ಯಾತ ಸಾಹಿತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಾದ ಶ್ರೀಮತಿ ವೈದೇಹಿಯವು ಬಿಡ್‌ಗಡೆ ಮಾಡ್ದೊ. ಅಕಾಡೆಮಿಂದ ಪುಸ್ತಕ ಬರ್ದ ಹತ್ತ್ ಲೇಖಕರಿಗೆ ನೆನ್‌ಪ್‌ನ ಕಾಣಿಕೆ ನೀಡಿ ಗೌರವಿಸಿದೊ, ಸಾಂಸ್ಕೃತಿಕ ಕಾರ್ಯಕ್ರಮಗಳ್ನ ಹಮ್ಮಿಕಂಡ್ ಕಾರ್ಯಕ್ರಮ ಯಶಸ್ವಿಯಾಗಿ ನಡ್ತ್.



## ಲೇಖಕರ ವಿಳಾಸ

1. **ಪ್ರೊ. ಪುರುಷೋತ್ತಮ ಬಿಳಿಮಲೆ**
   ನಿರ್ದೇಶಕರು, ಕನ್ನಡ ಭಾಷಾ ಪೀಠ ಭಾರತೀಯ ಭಾಷಾ ಕೇಂದ್ರ
   ಜವಾಹರ್ ಲಾಲ್ ನೆಹರು ಯುನಿವರ್ಸಿಟಿ ನವದೆಹಲಿ -110057
   (ಮೊ.ನಂ 01126738976, 09811733378

2. **ವಿದ್ವಾನ್ ಟಿ.ಜಿ ಮುಡೂರು,**
   ಪಂಜ, ಸುಳ್ಯ ದ.ಕ -574232
   ಮೊ.ನಂ 9449324260, 08257- 278338

3. **ಕುತ್ಯಾಳ ನಾಗಪ್ಪ ಗೌಡ (ಕಿರಣ)**
   ಕಿರಣ ಕುಟೀರ, ಯುವಜನ ಸಂಯುಕ್ತ ಮಂಡಳಿ ಹತ್ತಿರ,ಸುಳ್ಯ ದ.ಕ -574239
   ಮೊ.ನಂ 9448297221 E-mail: kngkirana@gmail.com

4. **ಎಂ.ಜಿ ಕಾವೇರಮ್ಮ**
   'ನಿಸರ್ಗ' ಮಾವಜಿ, ಸುಳ್ಯ ದ.ಕ 574239

5. **ಯೋಗೀಶ್ ಹೊಸೊಳಿಕೆ**
   ಗುತ್ತಿಗಾರು ಅಂಚೆ, ಸುಳ್ಯ, ದ.ಕ- 574218

6. **ಕೆ. ಸುಬ್ರಾಯ ಗೌಡ, ಗುತ್ತಿಗಾರು**
   ಪ್ರಾಂಶುಪಾಲರು, ಜಿ.ಪಿ.ಯು ಕಾಲೇಜು, ಬೆಳ್ಳಾರೆ
   ಮೊ.ನಂ: 94819611252

7. **ಗೋಪಾಲ ಪೆರಾಜೆ**
   ಕೊಳಂಗಾಯ ಮನೆ, ಅಂಚೆ ಪೆರಾಜೆ - 574314
   ಮೊ.ನಂ: 944825612

8. **ಭವಾನಿಶಂಕರ ಅಡ್ತಲೆ**
   ಕೆ.ವಿ.ಜಿ ಐ.ಟಿ.ಐ ಸುಳ್ಯ ದ.ಕ, ಕುರುಂಜಿಭಾಗ್ 574327

9. **ಮನೋಜ್ ಕುಡೆಕಲ್ಲ್**
   ಕುಡೆಕಲ್ ಮನೆ, ಆಲೆಟ್ಟಿ ಗ್ರಾಮ, ಸುಳ್ಯ ದ.ಕ
   ಮೊ.ನಂ 810574518

10. **ಸಂಗೀತ ರವಿರಾಜ್**
    ಹೊಸೂರು ಮನೆ, ಬಾಲಂಬಿ ಅಂಚೆ, ಚೆಂಬು ಗ್ರಾಮ,
    ಮಡಿಕೇರಿ ತಾಲೂಕು - 574234

11. **ಕಟ್ರತನ ಲಲಿತಾ ಅಯ್ಯಣ್ಣ**
    ಗೌಳಿಬೀದಿ, ಮಡಿಕೇರಿ

12. **ಕುಲ್ಲಚನ ಕಾರ್ಯಪ್ಪ,**
    ಕುಂಬಳದಾಳ್ ಗ್ರಾಮ, ಮಡಿಕೇರಿ, ಕೊಡಗು

**13. ಪ್ರಜ್ವಲ್ ಬಿ.ಎಸ್**
ಬೊಳ್ತಾಜೆ ಮನೆ ಬಾಲಂಬಿ ಅಂಚೆ
ಚೆಂಬು (ದಬ್ಬಡ್ಕ) ಗ್ರಾಮ, ಮಡಿಕೇರಿ ತಾಲೂಕು, ಕೊಡಗು

**14. ಡಾ. ಪೂವಪ್ಪ ಕಣಿಯೂರು**
ಸಹ ಪ್ರಾಧ್ಯಾಪಕರು
ನೆಹರು ಮೆಮೋರಿಯಲ್ ಕಾಲೇಜು ಸುಳ್ಯ
ಕುರುಂಜಿಬಾಗ್ ದ.ಕ –574327

**15. ಮಿಲನ್ ಎಂ.**
ಮಂಡೆಕೋಲು ಮನೆ
ತೊಡಿಕಾನ ಗ್ರಾಮ & ಅಂಚೆ, ಸುಳ್ಯ ದ.ಕ
ಮೊ.ನಂ 8762553086

**16. ಭವಾನಿಶಂಕರ ಹೊದ್ದೆಟಿ**
ಬೆಂಗಳೂರು
ಮೊ.ನಂ: 8331066066

**17. ವಿನೋದ್**
ಮಡಿಕೇರಿ, ಕೊಡಗು

**18. ಕೊಕ್ಕಲೇ ಮಾಲಿನಿ ಮುತ್ತಪ್ಪ**
ಹೆರವನಾಡು ಗ್ರಾಮ, ಅಪ್ಪಂಗಳ ಅಂಚೆ, ಮಡಿಕೇರಿ ತಾಲೂಕು
ಮೊ.ನಂ 944890729

## ಅಕಾಡೆಮಿಯ ಪ್ರಕಟಣೆಗ

| | | |
|---|---|---|
| ಸರ್ಮಾಲೆ | : | ಎಂ.ಜಿ ಕಾವೇರಮ್ಮ |
| ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ | : | ಎಂ.ಜಿ ಕಾವೇರಮ್ಮ |
| ಬೇರ್‌ಲಿ ಚಿಗ್‌ರ್ | : | ಬೈತಡ್ಕ ಜಾನಕಿ ಬೆಳ್ಯಪ್ಪ |
| ಕುಂಕುಮ | : | ಪೂಜಾರೀರ ಜಿ. ಮಾದಪ್ಪ |
| ಬೊಲ್ಪಾಕನ ಮುಗ್ತ್ | : | ವಿದ್ವಾನ್ ಟಿ.ಜಿ ಮುಡೂರು |
| ಬೇಟೆನ ಬಿರ್ಸ –ಬಡ್ಡಡ್ಕ ಅಪ್ಪಯ್ಯ ಗೌಡ್ರು | : | ವೇದಾವತಿ ಅನಂತ ಬಡ್ಡಡ್ಕ |
| ಬೆಳ್ಳಿಮುಷ್ಟಿ | : | ಕಟ್ರತನ ಕೆ. ಬೆಳ್ಯಪ್ಪ |
| ತೋರಣ | : | ಬಾರ್ಯಂಡ ಆರ್. ಜೋಯಪ್ಪ |
| ಬೊಲ್ಪು | : | ಲೋಕೇಶ್ ಕುಂಚಡ್ಕ |
| ಮತ್ತೆ ಸಿಕ್ಕಿತ್ ಕುಂಕುಮ | : | ಕಟ್ರತನ ಲಲಿತ ಅಯ್ಯನ |

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ (2014)

**ಸರಕಾರಿ ಅಧಿಸೂಚನೆ ಸಂಖ್ಯೆ: ಕಸಂವಾ 817 ಕಸಧ 2013; ದಿನಾಂಕ 13.08.2014**

**ಅಧ್ಯಕ್ಷರು:**

**ಶ್ರೀ ಕೊಲ್ಯದ ಗಿರೀಶ್,** ಮದೆ ಗ್ರಾಮ, ಮದೆ ಅಂಚೆ, ಮಡಿಕೇರಿ ತಾಲೂಕ್ 571 201
ದೂ: 08272-236515 ಮೊಬೈಲ್ : 9448156599.

**ರಿಜಿಸ್ಟ್ರಾರ್:**

**ಶ್ರೀ ಉಮರಬ್ಬ,** ಎಂ.ಎಂ. ಮಂಜಿಲ್, ಈದಾಯತ್ ನಗರ, ಕೋಟೆಕಾರ್, ಮಂಗಳೂರು,
ಮೊಬೈಲ್ : 9481149135

**ಅರ್ಥ ಸದಸ್ಯರು:**

**ಶ್ರೀ ಎಸ್.ಐ. ಭಾವಿಕಟ್ಟಿ,** ಉಪನಿರ್ದೇಶಕರು, ರಂಗಾಯಣ ಕಲಾಮಂದಿರ ಮೈಸೂರು,
ಮೊಬೈಲ್ : 9972103262

**ಸದಸ್ಯರು :**

**ಡಾ. ಪೂವಪ್ಪ ಕಣಿಯೂರು** ಸ್ಫೂರ್ತಿ 4ನೇ ಅಡ್ಡರಸ್ತೆ, ದಕ್ಷಿಣ ಬೀರಮಂಗಲ, ಚರ್ಚ್ ರೋಡು,
ಸುಳ್ಯ ದ.ಕ. ದೂರವಾಣಿ : 08257-232885/9448984485, pkaniyoor@gmail.com

**ಡಾ. ಕೋರನ ಸರಸ್ವತಿ ಪ್ರಕಾಶ್** ಸಹ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು,
ವಿರಾಜಪೇಟೆ, ಕೊಡಗು ಮೊಬೈಲ್ : 9483826271

**ಶ್ರೀ ಮೋಹನ್ ಸೋನ** ಸೋಣಂಗೇರಿ ನಡುಮನೆ, ಜಾಲ್ಸೂರು, ಸುಳ್ಯ ತಾಲೂಕು
ದ.ಕ.- 574239 ಮೊಬೈಲ್ : 9448791799

**ಶ್ರೀಮತಿ ಸಂಗೀತಾ ರವಿರಾಜ್**
ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು, ಮಡಿಕೇರಿ- 574234
ಮೊಬೈಲ್ : 7259135346

**ಶ್ರೀ ಯಶವಂತ ಕುಡೆಕಲ್**
ಕುಂಬೆತ್ತಿ ಬನ, ದುಗ್ಗಲಡ್ಕ, ಸುಳ್ಯ ದ.ಕ. -574239 ಮೊಬೈಲ್ : 9481180519

**ಶ್ರೀ ವಸಂತ ಬಿ.ಸಿ.**
ಬಾಕಿಲ ಮನೆ, ಕಲ್ಮಕಾರು ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9449999354

**ಶ್ರೀ ಬೋಜಪ್ಪ ಗೌಡ ಎಂ.** ಮದುವೆ ಗದ್ದೆ, ಉಬರಡ್ಕ ಮಿತ್ತೂರು, ಸುಳ್ಯ ತಾಲೂಕು
ದ.ಕ.- 574248 ಮೊಬೈಲ್ : 7760782925

**ಶ್ರೀ ಸದಾನಂದ ಗೌಡ ಮಾವಜಿ**
ಮಾವಜಿ, ಮಂಡೆಕೋಲು, ಸುಳ್ಯ ತಾಲೂಕು ದ.ಕ. - 574239 ಮೊಬೈಲ್ : 94481644638

**ಶ್ರೀ ಮೋಹನ್‌ದಾಸ್** ಮಂದ್ರೀರ, ಹೊಸ್ಕೇರಿ ಗ್ರಾಮ, ಮರಗೋಡು, ಮಡಿಕೇರಿ
ಮೊಬೈಲ್ : 9448720112

**ಸಹಸದಸ್ಯರು:**

**ಶ್ರೀ ಕುಡೆಕಲ್ ಸಂತೋಷ್** ಕುಡೆಕಲ್, ಹೆಮ್ಮತ್ತಾಳು ಗ್ರಾಮ, ಮುಕ್ಕಂದೂರು, ಮಡಿಕೇರಿ
ತಾಲೂಕು, ಕೊಡಗು ಮೊಬೈಲ್ : 9972538584, 8762110948

**ಶ್ರೀ ಕಾರ್ಯಪ್ಪ ಪಿ.ಎಸ್.**
ಪುಂಡಿಗದ್ದೆ, ಯೇನೇಕಲ್ ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9731197656

**ಶ್ರೀ ಅಣ್ಣಾಜಿ ಗೌಡ** ಪೈಲೂರು ಮನೆ, ಅಮರಮುಡ್ನೂರು ಗ್ರಾಮ, ಸುಳ್ಯ ತಾಲೂಕು
ದ.ಕ. - 574212 ಮೊಬೈಲ್ : 94488058748/9164401745

## ಹಿಂಗಾರ ತ್ರೈಮಾಸಿಕ ಪತ್ರಿಕೆ ಚಂದಾದಾರನ ತಿಳುವಳ್ಕೆಗೆ

- ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ 'ಹಿಂಗಾರ' ಪತ್ರಿಕೆನ ನೀವ್ ಎಲ್ಲವು ಸದಸ್ಯರ್ ಆಕು. ಬಿಡಿ ಸಂಚಿಕೆ ಬೆಲೆ ರೂ. 20.00, ತ್ರೈವಾರ್ಷಿಕಕೆ ರೂ. 200.00 ಅದೆ.
- ಸದಸ್ಯರ್ ಆದವುಕೆ ಪತ್ರಿಕೆನ ಅಂಚೆಲಿ ಕಳ್ಸುವೆ.
- ನೀವ್‌ಗ್ಳ ಪರಿಚಯಸ್ತರಿಗೆ ಸದಸ್ಯರಾಕೆ ಆಕೆ ತಿಳ್ಸೊಕು.
- ಕತೆಗ / ಪದ್ಯಗ / ಚುಟುಕ /ಲೇಖನಗ ಇತಂವುಕ್ಕೆಲ್ಲಾ ಅವಕಾಸ ಉಟ್ಟು.
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಸ್ಪಷ್ಟ ಬರ್ದಿರಕು.
- ಹೆಸರ್ / ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.

ನಾವ್‌ಗ್ಳ ವಿಳಾಸ :


**ಸಂಪಾದಕರ್**

**ಹಿಂಗಾರ ತ್ರೈಮಾಸಿಕ ಪತ್ರಿಕೆ**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

1ನೇ ಮಹಡಿ, ರಾಜಾಸೀಟ್ ರಸ್ತೆ, ಮಡಿಕೇರಿ – 571 201, ಕೊಡಗು ಜಿಲ್ಲೆ

ಈಮೇಲ್ : arebaseacademy@gmail.com

ವೆಬ್‌ಸೈಟ್ : www.arebaseacademy.com

ದೂರವಾಣಿ : 08272 - 223055



2014ರ ಗೌರವ ಪ್ರಶಸ್ತಿ ಮತ್ತು ಪುಸ್ತಕ ಬಿಡುಗಡೆ ಜಂಬರದ ಉದ್ಘಾಟನೆ



ಅತಿಥಿಗಳ ಒಟ್ಟಿಗೆ ದಶ ಬರಹಗಾರರ್



ಕೃತಿಗ ಲೋಕಾರ್ಪಣ ಗೊಳ್ಸಿ ವೈದೇಹಿವರಂದ ಮಾತ್



ಅತಿಥಿಗಳಿಂದ ಗೌರವ ಪ್ರಶಸ್ತಿ ಪ್ರದಾನ




ಸಾಂಸ್ಕೃತಿಕ ಅಭಿವ್ಯಕ್ತಿ



ಲೋಕಾರ್ಪಣೆಗೊಂಡ ಕೃತಿಗ